7 ತಿ . . . . . . . ರೂ ಚೆಂನಮಲ್ಲಿಕಾರ್ಜುನದೇವರ ಸಿಷ್ಯರು

8 . . . . . . . ಕಾರ್ಜುನದೇವರಿಗೆ ಕೋಟಿಪುರವರ್ಗದ ಗ್ರಾಮ

9 ಧರ್ಮಶಾಸನದ ಕ್ರಮವೆಂತೆಂದರೆ ನಂಮ ನಾಯಕತ

10 ನಕ್ಕೆ ಸಲುವ ಕುಂದುರುಪೆಯ ಸೀಮೆಯ ಬೊದುಗುಪ್ಪೆಯ

11 . . . . ದ ಬೆಳುಗುಪ್ಪೆ ಎಂಬ ಗ್ರಾಮಕ್ಕೆ ವೀರನರಸಿಂಗರಾಯಪು-

12 ರವೆಂಬ ಪ್ರತಿನಾಮವನೂ [ಕೊಟು] ಯೀ ವೀರನರಸಿಂಗ[ರಾಯ]ಪು-

13 ರವನು ನಿಂಮ ಗ್ರಾಮಕೆ ತಥಾತಿಥಿಯಲಾ . . . ವೀರನರಸಿಂಗದೇವಮಹಾರಾ-

14 ಯರಿಗೆ ಉಕ್ರುತವಾಗಬೇಕೆಂದು ನಿಮಗೆ ಮನಃಪೂರವಾಗಿ ಸಹಿರ(ಂ)ಣ್ಯೋ-

15 ದಕದಾನಧಾರಾಪೂರ್ವಕವಾಗಿ ಕೊಟ್ಟೆವು ಬೆಳುಗುಪ್ಪೆ ಎಂಬ ಗ್ರಾಮಕ್ಕೆ ಪ್ರತಿನಾಮವನು ವೀರನರ-
ಸಿಂಗದೇವಮ-

16 ಹಾರಾಯಪುರಕ್ಕೆ ಸಲುವ ಚತುಸೀಮೆ ವೊಳಗಣ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷೀಣಿ

17 ಆಗಾಮಿ ಸಿದ್ಧ ಸಾಧ್ಯಂಗಳೆಂಬ ಅಷ್ಟ[ಭೋಗತೇ]ಜಸ್ವಾಮ್ಯವನೂ ಆಗುಮಾಡಿಕೊಂಡು ಅನು-

18 ಭವಿಸೂದು ಎಂದು ಕಡವದ ಗಉ[ರ]ನಾಯ್ಕ ತಿರುಮಲನಾಯಕರು ಬಾಳಮಲ್ಲಿಕಾರ್ಜು-

19 ನದೇವರಿಗೆ ಮಠಪುರವಾಗಿ . . . . . . ಬೆಳಗುಪ್ಪೆ ಎಂಬ ಗ್ರಾಮಕ್ಕೆ ಪ್ರತಿನಾಮವಾದ

20 ವೀರನರಸಿಂಗದೇವಮಹಾ . . . . . . . ಲಾನಿ . . . . . . . . . . .

21 . . . . . ಆ ಪುರವನೂ ನಿಯ . . . . . . ಕ್ಕೆಯಲಿ ಆಚಂದ್ರಾರ್ಕಸ್ಥಾಯಿ ಆಗಿ
. . .

22 ಸೂದು ಅಂತು ಕಡವದ . . . ನಾಯಕರೂ ತಿಂಮಪನಾಯಕರೂ ಬಾಳಮಲ್ಲಿಕಾರ್ಜುನದೇ-

23 ವರಿಗೆ ಪುರವರ್ಗವಾಗಿ ಕೊಟ . . . ಧರ್ಮಶಾಸನ ಈ ಧರ್ಮಕ್ಕೆ ಆರೊಬರೂ ಅಳುಪಿದವರು

24 ಕಾಶೀಕ್ಷೇತ್ರದಲಿ ಗಂಗಾತೀರದಲಿ ಮಣಿಕರ್ಣಿಕೆಯಲಿ ತಂಮ ಮಾತಾಪಿತ್ರುಗಳನೂ ತಂಮ [ಮಕ್ಕ]-

25 ಳುಗಳನೂ ತಂಮ ಕೈಯಾರೆ . . ತಂಮ . . . . ದವರು . ಸ್ವದತ್ತಾದ್ದ್ವಿಗು-

26 ಣಂ ಪು(ಂ)ಣ್ಯಂ ಪರದತ್ತಾನುಪಾಲನಂ ಪರದತ್ತಾಪಹಾರೇಣ ಸ್ವ[ದತ್ತ]-

27 ಂ ನಿಷ್ಫಲಂ ಭವೇತ್ [।।*] ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾ-

28 ಲನಂ ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ [।।*] ಸ್ವದತ್ತಾಂ

29 ಪರದತ್ತಾಂ ವಾ ಯೋ ಹರೇತು ವಸುಂಧರಾ[ಂ*] ಷಷ್ಟಿವರ್ಷಸಹಸ್ರಾ-

30 ಣಿ ವಿಷ್ಠಾಯಾಂ ಜಾಯತೇ ಕ್ರಿಮಿ . . . . . . . . . ಧರ್ಮಶಾಸನ

31 . . . . . . . . ಮೂಊನಾಡು . . . . . . ಸ್ವಾಮಿ ವೊಪ್ಪ

32 . . . . . . . . . .

## No. 479.

(*A.R. No.* 410 *of* 1928.)

ON A SLAB SET UP IN THE OUTER PRAKARA OF THE MAHALINGESVARA TEMPLE AT BASRUR, COONDAPUR TALUK, SOUTH KANARA DISTRICT.

This is dated **Śaka 1433, Śukla, Māgha, śu. 5** corresponding to **A.D. 1510 January 14 Monday** (not verifiable), in the reign of **Bhujabala-Narasiṁga-Mahārāya** ruling from **Vijayanagarī**. It records that, under the orders of the king, **Mallapa-Nāyaka**, younger brother of **Sōvaṇa-Nāyaka** of **Kuṟugōḍ**, who was ruling over **Bārakūru-rājya**

collected *kāṇike* from the merchants of Paḍuvakēri in **Basarūr** for offerings and other services of the god Mahādēva and himself made a grant of the village **Paḍuva-Belatūr** in **Hāru-nāḍu** and **Mūḍa-Belatūr.** It also records that on Tuesday, ba. 8 of Chaitra, Īśvara, **Saṅkamma-Modaliti**, daughter of the grand-daughter of **Bemmaṇa-Bhaṇḍāri,** made a gift of 60 *varāhas* and an yearly grant of a fixed quantity of rice for the service of the same god.

1 ಶ್ರೀ ಗಣಾಧಿಪತಯೆ ನಮಃ ನಿರ್ವಿಘ್ನಮಸ್ತು । ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈ-

2 ಯಿಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ [॥*] ಸ್ವಸ್ತಿ ಶ್ರೀಜಯಾಭ್ಯುದಯಶಾಲಿವಾಹನಶಕ-

3 ವರ್ಷ ೧೪೩೦ ಸಂದು ಮೂಱನೆಯ ವರ್ತಮಾನದ ಶುಕ್ಲಸಂವತ್ಸರದ ಮಾಘ ಶುಧ ೫ ಲೂ ಶ್ರೀಮನ್ಮಹಾ-
ರಾಜಾಧಿರಾ-

4 ಜ ಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರಭುಜಬಲ ನರಸಿಂಗಮಹಾರಾಯರೂ ವಿಜಯನಗರಿಯ ಸಿಂ-
ಹಾಸನದಲೂ ಸು-

5 ಖಸಂಕಥಾವಿನೋದದಿಂದ ಸಕಲಸಾಂಬ್ರಾಜ್ಯವನು 'ಪ್ರತಿಪಾಲಿಸುವ ಕಾಲದಲೂ ಅವರ ನಿರೂಪದಿಂದ
ಕಂಱುಗೋಡ ಸೋವಣ-

6 ನಾಯಕರ ತಂಮ ಮಲ್ಲಪನಾಯಕರೂ ಬಾರಕೂರ ರಾಜ್ಯವನು ಆಳುವಲಿ ಬಸುಱೂರ ಪಡುವ-
ಕೇರ್ಯ್ಯ ಶ್ರೀಮಹಾದೇವರಿಗೆ

7 ಧ(ಂ)ರ್ಮಕ್ಕೆ ಅಮ್ರುತಪಡಿ ನಂದಾದೀವಿಗೆ ಅಂಗರಂಗಪಯಿಭೋಗ ನಡವ[ಹಾ*]ಗೆ ಮಲ್ಲಪವೊಡೆಯರೂ
ಪಡುವಕೇರಿಯ ಹಲರು ಸೆಟಿ-

8 ಕಾಱರ ಕಯ್ಯಲೂ ಹೊಂನನು ಕಾಣಿಕೆಯ ಮಾಡಿಸಿಕೊಂಡು ಆ ಮಹಾದೇವರಿಗೆ ಪಂಚಾಮ್ರುತ
ಮುಂತಾಗಿಹ

9 ಧರ್ಮಕೆ ಬಿಟ್ಟ ಊರು ಹಾಱುನಾಡ ವೊಳಗೆ ಪಡುವ ಬೆಲತೂರ ಚತುಸ್ಸೀಮೆ ವಿವರ ಅವಳಾಡಿಯ
ಗಡಿಯಿಂ ಪಡುವಲು ಯೆ-

10 ತಿದ ಅಗಳಿಂದ ಬಡಗಲು ಹೆಂಪಾಡಿಯ ಗಡಿಂ ಪಡುವಲು ಹೊಳೆಯಿಂ ತೆಂಕಲು ಕುದುರು ಸಹವಾಗಿ
ಮೂಡಬೆಲತೂರ

11 ಚತುಸೀಮೆಯ ವಿವರ ಮೂಡಲು ತೋಕನಾಡಿಯ ಗಡಿಯಿಂ ಪಡುವಲು ಯೆತ್ತಿದ ಅಗಳಿಂದ ಬಡಗಲು
ಅವಳಾಡಿಯ ಗಡಿ-

12 ಯಿಂ ಮೂಡಲು ಹೊಳೆ[ಯಿಂ *] ಬಡಗಲು ಯೀ ನಾಲುಕು ಚತುಸ್ಸೀಮೆವೊಳಗೆ ಯೀ ಯೆರಡು
ಊರಲು ಅರಮನೆಗೆ ಸಲುವ ಕುಳ ಪ್ರಮಾಣದ ಹೊ-

13 ನ್ನು ಅಲ್ಲಿಯ ಅಸಾಧ್ಯ ಪಾರುಪತ್ಯ ನಿಧಿ ನಿಕ್ಷೇಪ ಜಲ ಪಾಷಾಣ ಅಷ್ಟಭೋಗ ಸಹವಾಗಿ ಆಚಂದ್ರಾ-
ರ್ಕವಾಗಿ ಬಾಳುವಂತಾಗಿ ಧಾರಾಪೂ-

14 ರ್ವಕವಾಗಿ ಬಾಳಿ ಯೆಂದು ಬರಸಿ ಕೊಟ್ಟ ಶಿಲಾಶಾಶನ ಮಲ್ಲಪ್ಪನಾಯಕರ ವೊಪ ಬಾರಕೂರ ಕರಣಿಕ
ನಾಯಪಗಳ ಮಗ ಮಲ-

15 ರಸರ ಬರಹ ಹಾಱುನಾಡು ಸಮಸ್ತರ ವೊಪ ಬೆಲತೂರ ಜಾನಿಗಳ ವೊಪ [॥*] ಸ್ವದತ್ತಂ ವಾ ಪರದತ್ತಂ
ವಾ ಯೋ ಹರೇತಿ ವಸು-

16 ಂಧರ ಷಷ್ಟಿರ್ವರುಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*] ॥ ದಾನಪಾಲ[ನ*]ಯೋರ್ಮಧ್ಯೇ
ದಾನಾಶ್ರೇಯೋನುಪಾಲನಾತು ದಾನಾತು

17 ಸ್ವರ್ಗಮವಾಪ್ನೋತಿ ಪಾಲನಾದಚುತಂ ಪದಂ ॥ ಯೀಶ್ವರಸಂವತ್ಸರದ ಚಯಿತ್ರ ಬ ೮ ಮಂ ಲೂ ಬಸು-
ಱೂರ ಪಡುವಕೇ-

18 ರಿಯ ಮಹಾದೇವರಿಗೆ ಕೊಂಗಬಳಿಯ ತೊಳಹರ ಬಳಿಯ ಅಂಱುಭಂಡಾರಿ ಬೆಂಮಣಭಂಡಾರಿಯ

19 ಮೊಂಮೆಗಳ ಮಗಳು ಸಂಕಂಮವೊದಲಿತಿ ಮಹಾದೇವರ ಚೆಂಬಿನ ಕೆಲಸಕ್ಕೆ ಕೊಟ್ಟ ದೊಡ ವರಹ ಗ ೬೦ ಅ ವ-

20 ರಹಗೆ ಬಡಿ ವರುಷಂಪ್ರತಿಯಲು ಬೆಲತೂರ ಹೊಂನಿನ ಪ್ರೊಳಗೆ ವರಹ ಗ ೪ ॥ ಗೆ ನಾಳೆಂಡುಗದ ಅವೊ ೧೧ ।೦

21 ಅಕಿಯನೂ ಮಹಾದೇವರಿಗೆ ಮೊಸರ ಉಪಾರಕ್ಕೆ ಆಚಂದ್ರಾರ್ಕ್ಕವಾಗಿ ನಡವಂತಾಗಿ ಸಂಕಮವೊದ-ಲಿತಿ ಮಾಡಿದ[1]

## No. 480.

(*A.R. No.* 217 *of* 1913.)

ON A STONE NEAR THE ANJANEYA TEMPLE AT YALPI, BELLARY TALUK, BELLARY DISTRICT

This is damaged and dated **Śaka 1431, Śukla, Māgha, ba. 14, Śivarātri,** corresponding to **A.D. 1510 February 7 Thursday** (not verifiable), in the reign of **Kṛishṇarāya-Mahārāya.** It records the abolition of the cess on marriages in the **Yaḷape-sīme,** made for the merit of the king.

1 ಸ್ವಸ್ತಿ [।।*] ಶ್ರೀಜಯಾಭ್ಯುದಯಶಾಲಿವಾಹನಶಕವರುಶಂ-
2 ಗಳು ೧೪೩೧ ನೆಯ ಶುಕ್ಲಸಂವತ್ಸರ ಮಾಘ ಬ ೧೪ ಶಿವಾರಾತ್ರಿ ಪುಂ-
3 ಣ್ಯ[ಕಾ]ಲದಲು ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ-
4 [ವೀರ]ಪ್ರತಾಪ [ಶ್ರೀಕೃಷ್ಣ]ರಾಯಮಹಾರಾಯರ ನಿಜಹಿತರಾದ
5 . . . . . . . . ಡೆಯರು ಕೃಷ್ಣರಾಯರು
6 . . . . . . [ಯ]ಳಪೆ ಸೀಮೆಯ ಮದುವೆಯ
7 . . . . . . ವೆನು ಕೃಷ್ಣರಾಯಮಹಾ-
8 ರಾಯರಿಗೆ . . . . . [ಕಂ]ದು ಸರ್ವಮಾನ್ಯವಾಗಿ ಪಾಲಿ-
9 ಸಿ ಬಿಟ . . . . . . [ರೊ]ಬರು ತಪ್ಪಿ ಸುಂಕವ ಕೊಂಡ-
10 ವನು . . . . . [ಕ]ತ್ತೆಯ ತುಣೆಯ ತಿಂದು
11 . . . . . . [ಕಳ ಕುಡಿದ] ಪಾಪ
12 . . . ದಕೆ . . ಸುಂಕವ ಕೊಂಡವನು ತ[ನ್ನ]
13 . . . . . ತಲಾರಿಕೆಗಳು ಮದುವೆ
14 . . ಮದವಣಿಗೆ ಕೊಟ್ಟವನು ಯೆಂದು
15 ಹಾಕಿದ ಶಾಸನ ಧರ್ಮ್ಮ ಜಯತು [।।*]

## No. 481.

(*A.R. No.* 227 *of* 1913.)

ON A STONE LYING NEAR THE MALLESVARA TEMPLE AT MOKA, BELLARY TALUK, SAME DISTRICT.

This is damaged and dated **Śaka [1431], Śukla, Māgha, ba. 1[4], Śivarātri** corresponding to **A D. 1510 February 7 Thursday** (not verifiable). It records that **Kṛishṇarāya-Mahārāya** made a gift of the village **Malukaṇa** for his own well-being.

1 [ಸ್ವ]ಸ್ತಿ [।।*] ಶ್ರೀಜಯಾಭ್ಯುದಯ-
2 ಶಾಲಿವಾಹನಶಕವರುಷ [೧೪೩೧]
3 ನೆಯ ಶುಕ್ಲಸಂವತ್ಸರದ ಮಾಘ ಬ ೧[೪]
4 ಸಿವರಾತ್ರಿ ಪುಣ್ಯಕಾಲದಲು ಶ್ರೀಮ[ನ್ಮಹಾ]-

[1] The inscription stops here abruptly.

5 ರಾಜಾಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪ
6 ಶ್ರೀಕೃಷ್ಣರಾಯಮಹಾರಾಯರು . . .
7 . . . ಬಗೆ ಕಾಮೇಣನಾಯಕರೂ . . .
8 ಮಹಾರಾಯರು ತಮಗೆ ಕ್ಷೇಮವಾಗಬೇಕೆಂದು
9 . . ಮಲುಂಕಣವೆಂಬ ಗ್ರಾಮದ . . . .
10 . . . . . . . . . . . . .
11 . . . ದಾನವ ಮಾಡಿ ಸಲಿಸಿದ . . [1]

## No. 482.

(*A.R. No.* 717 *of* 1917.)

ON THE SOUTH WALL OF THE SANKRESVARA TEMPLE AT AGALI, MADAKASIRA TALUK, ANANTAPUR DISTRICT.

This is damaged and dated **Śaka 1432, Pramōda, Āśvayuja, śu. 12,** corresponding to **A.D. 1510 September 15 Sunday** (not verifiable), in the reign of **Krishṇarāya.** It records that in the districts of **Ghanagiri, Gutti, Ghaṇḍikōṭa, Siddhavaṭṭi, Siddhāpura, Chandragiri, Nāgamaṅgala, Muḷuri** and **Rāyadurga** the king abolished the marriage-cess, irrespective of caste, for all time. The record is partly in Sanskrit.

1 ಶುಭಮಸ್ತು
2 ಸ್ವಸ್ತಿ [||*] ಶ್ರೀಜಯಾಭ್ಯು[ದ*]ಯಶಾಲಿವಾಹನಶಕವರುಷ [೧೪]೩೨ ನೆ-
3 ಯ ಪ್ರಮೋದಸಂವತ್ಸರದ ಆಸ್ವಯುಜ ಶುದ ೧೨ ಯೋ ತಿಥಿಲು
4 ಶ್ರೀ ಕೃಷ್ಣ[ರಾಯರು] ಶ್ರೀವಿರೂಪಾಕ್ಷ ಸಂನಿಧಿಯಲಿ ಪು(ಂ)ಣ್ಯಾಯ
5 . . . . ಶಾಗ್ರಂಣ್ಯಮಾನೇನ ವ . . .
6 . . . . . . . . ಶಾಲಿನಾವ . .
7 . . . . ಕರಂಗೋಪೆ . . . . ಆಚಂದ್ರತಾರಕಂ ಧಾರಾಪೂರ್ವ್ವ-
8 ಕಂ ಮುಕ್ತ್ವಾ(ಂ)ನ ಮುದಾ ಘನಗಿರ್ಯಾಖ್ಯರಾಜ್ಯೇ ಚ ಗುತ್ತಿರಾಜ್ಯೇ ಚ ವಿಶ್ರುತೇ ರಾ-
9 ಜ್ಯೇ ಘಂಡಿಕೋಟಸ್ಥಳೇ ಶ್ರುತೇ ಸಿದ್ಧವಟ್ಟ . . . ಯಾ ಸಿದ್ಧಾಪುರಸೀಮಾಖ್ಯವಿಶ್ರುತೇ
10 ಚಂದ್ರಗಿರಿಯಾಖ್ಯರಾಜ್ಯಸ್ಯ ನಾಗಮಂಗಲಸೀಮಗಂ ಮುಳುಯ್ಯಾಖ್ಯೇ ಮಹಾ-
11 ರಾಜ್ಯೇ ರಾಯದುರ್ಗ್ಗೇ ಮಹತ್ಯಪಿ ರಾಜ್ಯೇ ತೇಷು ಚ ರಾಜ್ಯೇಷು ತೇಷು ತೇಷು ವಸಂತಿ ಯೇ
12 ನಾನಾಜಾತಿಭಿಧೇಸ್ತ್ಸ್ಯ ವಿವಾಹಸಮಯಂ ನಿಜೇ ವಧೂವರಜನ್ಯೆ ಸರ್ವ್ವಥಿರ್ಮಾನಂ ಕರಂ ಚಿ-
13 ರಂ ಆಚಂದ್ರತಾರಕಂ ಧಾರಾಪೂರ್ವ್ವಕಂ ಸರ್ವ್ವಕರ . . ತಿಂಮಾಪುರಂ ಸಿಂಗಣ-
14 [ಭೂ]ಮಿಪಾಲಸ್ಯ ಸಾಸನಂ [||*]

## No. 483.

(*A.R. No.* 685 *of* 1919.)

ON A STONE SET UP BY THE SIDE OF THE ROAD TO ALUR AT HATTI-BELAGALLU, ALUR TALUK, BELLARY DISTRICT.

This is dated **Śaka 1432, Pramōdūta, Māgha, ba. 2, Guruvāra** corresponding to **A.D. 1511 January 11 Thursday.** It records that **Hanumappa,** a servant of king **Krishṇadēvarāya,** set up Pēṭeya-Basava, and mentions **Hattiya-Beḷugallu** and **Jakke-Nāyaka.**

1 The rest of the inscription is badly damaged.

1 [1]ಸ್ವಸ್ತಿ [।।*] ಶ್ರೀಜಯಾ-
2 [ಭ್ಯು]ದಯಶಾಲಿವಾ-
3 ಹನಶಕವರುಷ
4 ೧೪೩೩ ನೆಯ ಪ್ರ-
5 ಮೋದೋತಸಂವಚ್ಛರ-
6 ದ ಮಾಘ ಬ [೨] ಗು ಲು ಶ್ರೀ[ವೀ]-
7 ರಪ್ರತಾಪ ಕೃಷ್ಣದೇವರಾಯ-
8 ರ ನಿರುಪದಿಯ ಜಕ್ಕನಾಯ್ಕರು ಹತ್ತಿ-
9 ಯಬೆಳುಗುಲ್ಲ ಜಕ್ಕನಾ . . .
10 ಶ್ರೀ ಕೃಷ್ಣರಾಯರ ಊಳಿಗದ ಹನುಮ-
11 ಪ್ಪನು ಜಕ್ಕನಾಯಕರ ನಿರುಪದಿಯ .
12 . ಮಾಡಿದ ಪೇಟೆಯ ಬಸವ . . . .
13 ಶಾಸನ [।।*]

## No. 484.

(*A.R. No.* 724 *of* 1922.)

ON TWO PIECES OF A BROKEN SLAB SET UP IN FRONT OF THE HANUMANTARAYA TEMPLE AT HAMPEDEVANAHALLI, HOSPET TALUK, BELLARY DISTRICT.

This is dated **Śaka 1433, Prajāpati, Chaitra, śu. 13, Budhavāra** corresponding to **A.D. 1511 March 12 Wednesday,** in the reign of **Kṛishṇarāya-Mahārāya.** It records the gift of the village **Haṁpadēvahaḷḷi,** surnamed **Kṛishṇarāyapura,** in **Nāri-sīme** to various Brāhmans (named), in the presence of the god **Virūpākshadēvā** on the bank of the **Tuṅgabhadrā** river. It refers to a copper-plate grant issued in this connection.

*First Face.*

1 ಶುಭಮಸ್ತು ।। ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ
2 ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂಭವೇ ।। ಸ್ವಸ್ತಿ ಶ್ರೀ-
3 ಜಯಾಭ್ಯುದಯಶಾಲಿವಾಹನಶಕವರ್ಷ ೧೪೩೩ ನೆಯ ಪ್ರಜಾಪತಿ-
4 ಸಂವತ್ಸರದ ಚೈತ್ರ ಶು [೧]೩ ಬು ಲು ಶ್ರೀಮ(ಂ)ನ್ಮಹಾರಾಜಾಧಿರಾ-
5 ಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರಕೃಷ್ಣರಾಯ-
6 ಮಹಾರಾಯರೂ ನಾನಾಗೋತ್ರದ ನಾನಾಶಾಖೆಯ ಅಸೇಷವಿ-
7 ದ್ವ(ಂ)ನ್ಮಹಾಜನಂಗಳಿಗೆ ಕೊಟ್ಟ ಅಗ್ರಹಾರ ಭೂದಾನದ ಕ್ರಮವೆಂ
8 . . . . . . . . . . . . . [ತಿ]ಯವೇಂಕಯದ
9 ನಾರಿಸೀಮೆಯ ವೊಳಗಣ ಹಂಪದೇವಹಳ್ಳಿ ಯೆಂಬ ಗ್ರಾ . .
10 ನೂ ಶ್ರೀಕೃಷ್ಣರಾಯಪುರವೆಂದು ಪ್ರತಿನಾಮವ ಮಾಡಿ ಸರ್ವಮಾ(ಂ)-
11 ನ್ಯದ ಅಗ್ರಹಾರವನೂ ತುಂಗಭದ್ರಾತೀರ ಭಾಸ್ಕರಕ್ಷೇತ್ರ
12 ಶ್ರೀವಿರೂಪಾಕ್ಷದೇವರ ಸಂನಿಧಿಯಲು ನಮಗೆ ಪುಣ್ಯವಾಗ-
13 ಬೇಕೂ ಯೆಂದು ಯೀ ತಥಾತಿಥಿಯ ಮನ್ವಾದಿಪು(ಂ)ಣ್ಯಕಾಲದಲು ಸ-
14 ಹಿರ(ಂ)ಣ್ಯೋದಕದಾನಧಾರಾಪೂರ್ವಕ ಸದ್ಯಃಪರಿಚ್ಛೇದವಾಗಿ ಧಾ-
15 ರೆಯನೆರದು ಕೊಟ್ಟ ತಾಂಬ್ರಶಾಸನವನ್ನೂ ಕೊಟ್ಟು ಮಾಡಿ-
16 ದ ವ್ರಿತ್ತಿ ೧೦೪ ಅಕ್ಷಾರದಲೂ ಯಿದೇ ನೂಱಅಇದು ವ್ರಿ-
17 ತ್ತಿಯ ಕ್ಷೇತ್ರಕ್ಕೆ ಅತ್ರೇಯಗೋತ್ರದ ರುಕುಶಾಖೆಯ ಚಿಪ್ಪಗಿರಿಯ
18 ಹಂಪಂಣಗಳ ಮಕ್ಕಳು ಲಿಂಗಂಣಗಳಿಗೆ ವ್ರಿತ್ತಿ ೪ । ರೇಖೆ

1 Every line commences with a circle.

19 ಕಾಶ್ಯಪಗೋತ್ರದ ರುಕುಶಾಖೆಯ . . . . . ಇಂಮಡಿ (ಭ)-
20 ಭಟರ ಮಕ್ಕಳು ಶಿವಾದೀಕ್ಷಿತರಿಗೆ ವೃತ್ತಿ ೩ ಆತ್ರೇಯಗೋತ್ರ-
21 ದ ರುಕುಶಾಖೆಯ ಸಿಧನಾಥಭಟರ ಮಕ್ಕಳು ಅರೆಯ ಕೃಷ್ಣಭ-
22 ಟ್ಟರಿಗೆ ವೃತ್ತಿ ೨ ಕಾಶ್ಯಪಗೋತ್ರದ ಯಜುಶಾಖೆಯ [ನಾರಸಿಂಭಟ್ಟ]-
23 ರ ಮಕ್ಕಳು ಸೋಮಾಭಟ್ಟರಿಗೆ ವೃತ್ತಿ ೪ ಕಾಶ್ಯಪಗೋತ್ರದ ಯಜುಶಾ-
24 ಖೆಯ ನಲ್ಲಚೆಲಮೆಯ ಪೆದ್ದಿಭಟ್ಟರ ಮಕ್ಕಳು ವಿಶ್ವನಾಥಭಟ್ಟರಿ-
25 ಗೆ ವೃತ್ತಿ ೪ ಭಾರದ್ವಾಜಗೋತ್ರದ ರುಕುಶಾಖೆಯ ಆಲೂರ ಬಸವಾ-
26 ಭಟ್ಟರ ಮಕ್ಕಳು ವಿರುಪಾಕ್ಷಭಟ್ಟರಿಗೆ ವೃತ್ತಿ ೫ ಕೌಶಿಕಗೋ-
27 ತ್ರದ ಯಜುಶಾಖೆಯ ಪೆರುಮಕಿ ಅಹುಭಳಭಟರ ಮಕ್ಕಳು ಜ್ಞಾನ-
28 ದೇವಭಟ್ಟರಿಗೆ ವೃತ್ತಿ ೪ ವಶಿಷ್ಟಗೋತ್ರದ ರುಕುಶಾಖೆಯ ಮಲ್ಲಿಭ-
29 ಟ್ಟರ ಮಕ್ಕಳು ದೇವಾಭಟ್ಟರಿಗೆ ವೃತ್ತಿ ೨ ಭಾರದ್ವಾಜಗೋತ್ರದ ಯ-
30 ಜುಶಾಖೆಯ ಸ್ವಯಂಪಾಕ ಬಾಚಣಭಟ್ಟರ ಮಕ್ಕಳು [ರಾಮಾ]-
31 ಭಟ್ಟರಿಗೆ ವೃತ್ತಿ ೪ ವಿಶ್ವಾಮಿತ್ರಗೋತ್ರದ ರುಕುಶಾಖೆಯ
32 ಜಟೆಯ ವಿಠಣಭಟರ ಮಕ್ಕಳು ಸೋಮಾಭಟ್ಟರಿಗೆ ವೃತ್ತಿ ೨

*Second Face.*

33 ಗೌತಮಗೋತ್ರದ ಯಜುಶಾಖೆಯ ಯಾಯಾವರ
34 ಗೌರಿದೇವಭಟ್ಟರ ಮಕ್ಕಳು ಮಲ್ಲಿಭಟ್ಟರಿಗೆ ವೃತ್ತಿ ೪
35 ಕೌಶಿಕಗೋತ್ರದ ರುಕುಶಾಖೆಯ ಕೃಷ್ಣಭಟ್ಟರ [ಮ]-
36 ಕ್ಕಳು ತಿರುಮಲಭಟ್ಟರಿಗೆ ವೃತ್ತಿ ೧ ಶಾಂಡಿಲ್ಯಗೋ-
37 ತ್ರದ ಯಜುಶಾಖೆಯ ಇಟ್ಟಿಗೆಯ ಲಖಣಭಟ್ಟರ ಮಕ್ಕ . .
38 . ದೇವಭಟ್ಟರಿಗೆ ವೃತ್ತಿ ೪ ಕಾಶ್ಯಪಗೋತ್ರದ ಶುಕ್ಲಯಜು[ಶಾಖೆ]-
39 ಯ ಚೆನ್ನಾಭಟ್ಟರ ಮಕ್ಕಳು ರೇವಣಭಟ್ಟರಿಗೆ ವೃತ್ತಿ ೨ ವ-
40 ಶಿಷ್ಟಗೋತ್ರದ ರುಕುಶಾಖೆಯ ಮಳಗೆಯ ಅನಂತಭ . . .
41 ಮಕ್ಕಳು ವಿಷ್ಣುಭಟ್ಟರಿಗೆ ವೃತ್ತಿ ೨ ಭಾರದ್ವಾಜಗೋತ್ರ
42 . . . . . ಮಲಿಗೆಯ ಅನಂತಭ . . .
43 . . . ಮಕ್ಕಳು ವಿಷ್ಣುಭಟ್ಟರಿಗೆ ವೃತ್ತಿ ೪ ಭಾರದ್ವಾಜಗೋತ್ರ
44 . . ದ ಯಜು . . . . ರತ್ನಭಟ್ಟರಿಗೆ . . . .
45 ವಿಠಲಭಟ್ಟರಿಗೆ ವೃತ್ತಿ . . . .
46 . . . . . . . . . . .
47 . . . ತ್ತಿ ೪ ಆತ್ರೇಯಗೋತ್ರದ
48 . . . . . . . . . . . . ಶಾಖೆ ಅ .
49 . . ಸದಾಶಿ . . . . . . . . . . . . ರಿಗೆ ದಾನವಾಗಿ
50 ದೇವ . . . . . . . . . . ಸೆ ಗ್ರಾಮ ಕೊಳಗದ
51 ವಿಜ . . . . . . ಯೊ ಅಗ್ರಹಾರಕ್ಕೆ ಸಲುವ ಅಷ್ಟಭೋಗ
52 ತೇಜಸಾಂಮ್ಯ . . . . . . . . ಬಳಿ ಸಹಿತವಾಗಿ ನೀವೂ ನಿಂ-
53 ಮ ಪುತ್ರಪೌತ್ರಪಾರಂಪರಿಯದಿಂದ ಆಚಂದ್ರಾರ್ಕಸ್ಥಾಯಿ-
54 ಗಳಾಗಿ ಸುಖದಿಂದ ಅನುಭವಿಸುತ್ತಿರಬೇಕೆಂದು ಕೊಟ್ಟ ಸರ್ವಮಾ-
55 ನ್ಯದ ಅಗ್ರಹಾರ ॥ ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇ-
56 ಯೋನುಪಾಲನಂ ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯು-
57 ತಂ ಪದಂ ॥ ಮಂಗಳ ಮಹಾಶ್ರೀ ಶ್ರೀ ಶ್ರೀ ॥

## No. 485.

(*A.R. No.* 742 *of* 1916.)

ON A SLAB SET UP NEAR THE NARASIMHASVAMI TEMPLE AT UPPADIHALLI, MADAKASIRA TALUK, ANANTAPUR DISTRICT.

This is dated **Śaka 1434, Āṅgira, Vaiśākha, śu. 15,** corresponding to **A.D. 1512 April 30 Friday** (not verifiable), in the reign of **Kṛishṇadēvarāya-Mahārāya.**

It records that **Ellaya,** a servant of the king made a gift of the village **Upuḍihaḷḷi,** situated in **Rodda-nāḍu,** a district of **Māraṭūr-sīme,** for the service of the god **Ahōbala-Nārasiṁha** at **Hiriya-Dhāḷivaṭa.** The gift was made for the merit of the king.

1 ಶುಭಮಸ್ತು । ಸ್ವಸ್ತಿ ಶ್ರೀವಿಜಯಾ-
2 ಭ್ಯುದಯಶಾಲಿವಾಹನಶಕಾಬ್ದ ೧೪೩೪
3 ನೆಯ ಮೇಲೆ ಸಲುವ ಅಂಗಿರಸಂವತ್ಸರ-
4 ದ ವೈಶಾಖ ಶು ೧೫ ಲು ಶ್ರೀಮ(ಂ)ನ್-
ಮ-
5 ಹಾರಾಜಾಧಿರಾಜ ಪರಮೇಸ್ವರ ಶ್ರೀಕೃ-
6 ಷ್ಣದೇವರಾಯಮಹಾರಾಯರ ಊ-
7 ಳಿಗದ ಎಲ್ಲಯನು ಹಿರಿಯ ಧಾಳಿವಟ-
8 ದ ಅಹೋಬಲನಾರಸಿಂಹದೇವರಿಗೆ ಸಾ-
ಷ್ಟ್ಯಾಂ-
9 [ಗ*]ವಾಗಿ ಕೊಟ ಧರ್ಮ್ಮಸಾಸನ ನಂ-
ಮ ನಾಯ-
10 ಕತನಕೆ ಸಲುವ ಮಾರಟೂರ ಸೀಮೆಯ ರೊ-
11 ದ್ದನಾಡೊಳಗಣ ಉಪುಡಿಹಳಿಯನೂ
12 ಶ್ರೀವೀರಕೃಷ್ಣದೇವರಾಯಮಹಾರಾ-
ಯ-
13 ರಿಗೆ ಧರ್ಮ್ಮವಾಗಿ ಅಹೋಬಲದೇವರಿಗೆ ದ-
14 ಧ್ಯಾಂನ ದೀಪಾರಾಧನೆ ಶ್ರೀಕಾರ್ಯ್ಯಂ-
ಗಳಿಗೆ
15 ಪೌರ್ಣಮಿ ಪು(ಂ)ಣ್ಯಕಾಲದಲೂ ಧಾ-
16 ರಾಗ್ರಹೀತವಾಗಿ ಸದ್ಯಪರಿಛೇದವಾಗಿ
17 ಕೊಟೆವಾಗಿ ಯೀ ಗ್ರಾಮಕೆ ಸಲುವ ಕೆಱೆ
ಗದೆ
18 ಬಿತ್ತ ಗುಯಿಲು ಕಾಡಾರ[ಂ*]ಭ ಸಕಲ
ಸ್ವರ್ಣ-
19 ದಾಯ ಸಕಲ ಧಾನ್ಯಾದಾಯ ಏನುಂಟಾ-
20 ದ ಅಷ್ಟಭೋಗ ಸರ್ವಸ್ವಾಮ್ಯಂಗಳನು
21 ಆಗುಮಾಡಿಕೊಂಬುದು ಶ್ರೀ
22 ಯೀ ಧರ್ಮ್ಮಕೆ ಆವನೊಬ ಅ-
23 ಳುಪಿದವ ತಂಮ ಮಾತಾ-
24 ಪಿತರುಗಳನೂ ಗೋಬ್ರಾ-
25 ಹ್ಮಣರನೂ ವಾರಣಾಸಿ
26 ತೀರದಲೂ ಕೊರಳ ಕುಯಿದ
27 ಪಾಪ್ಪಕೆ ಹೋಹನು ॥
28 ಅವನ ವಂಶವೆಲ್ಲಾ ನಿರ್ವಂ-
29 ಶ ಅಹುದು ಶ್ರೀ ಅಹೋ
30 ಬಳೇಸ್ವ[ರ*]ನೇ ಬಲ್ಲ ಶ್ರೀ [॥*]

## No. 486.

(*A.R. No.* 96 *of* 1913.)

ON A PILLAR LYING IN THE OUTER PRAKARA OF THE MALLIKARJUNA TEMPLE AT KAMBADURU, KALYANDRUG TALUK, ANANTAPUR DISTRICT.

This is dated **Śaka 1434, Āṅgirasa, Kārtika, śu. 12,** corresponding to **A.D. 1512 October 23 Friday** (not verifiable), in the reign of **Kṛishṇarāya-Mahārāya.** It records that **Rāyasada Koṇḍamarasayya** made a gift of land in **Kaṁbhadūru** situated in **Kundurupe-sīme** for the service of the god Mallikārjuna of the village. The gift was made for the merit of the king.

1 ಶುಭಮಸ್ತು [॥*] ಶ್ರೀ ಗಣಾಧಿಪತಯೆಂ
2 ನಮ [ಃ*] । ಸ್ವಸ್ತಿ ಶ್ರೀಜಯಾಭ್ಯುದಯ-
ಶಾ-
3 ಲಿವಾಹನಶಖವರುಷ ೧೪೩೪ ನೆಯ
4 ಅಂಗಿರಸಸಂವತ್ಸರದ ಕಾರ್ತಿಕ ಶು ೧೨ ಲು
5 ಶ್ರೀಮನ್ಮಹಾರಾಜಾಧಿರಾಜ ರಾಜಪ-
6 ರಮೇಸ್ವರ ಶ್ರೀವೀರಪ್ರತಾಪ ಶ್ರೀಕೃ-
7 ಷ್ಣರಾಯಮಹಾರಾಯರುಗಳ ಕಾ-
8 ರ್ಯಕೆ ಕರ್ತರಾದ ರಾಯಸ್ತ ಕೊಂ-
9 ಡಮರಸೆಯನವರು ಕಂಭದೂರ ಶ್ರೀ-
10 ಮಲ್ಲಿಕಾರ್ಜುನದೇವರಿಗೆ ಸರ್ವ್ವಮಾನ್ಯ-
11 ವಾಗಿ ಬಿಟುದು । ರಾಯರು ನಮಗೆ ಪಾ-
12 ಲಿ[ಸಿ*]ದ ಕುಂದುರುಪೆಯ ಸೀಮೆಯ
ವೊಳಗ-
13 ಣ ಕಂಭದೂರ ಕೆಱೆಯ ಕೆಳಗೆ ಪೂ-
14 ರ್ವಮೊದಲಾಗಿ ಸಲುವ ಮಾನ್ಯಸ್ತಳದ
15 ಗದೆ ಪಂಡೇನಹಳಿ ಪುರವರ್ಗಕೆ ಸಲುವ
16 ಕುಂಟೆ ಕಾಲುವೆಸ್ತಳದ ಗದೆ ಚತುಸೀಮೆ
17 ವೊಳಗಾದ ಹೊಲನು ಯಿದನು ಕೃಷ್ಣ-
ರಾ-
18 ಯಮಹಾರಾಯರಿಗೆ ಧ(ಂ)ರ್ಮವಾಗಬೇ-
19 ಕೆಂದು ಶ್ರೀಮಲ್ಲಿಕಾರ್ಜುನ(ಂ)ದೇವರಿಗೆ
ಸರ್ವ-
20 ಮಾನ್ಯವಾಗಿ ಕೊಟೆವು ಯಿದಕೆ ಆವನಾ-

21 ನೊಬನೂ ತುದರೆ ವಾರಣಾಸಿಯ ತಡಿ-
22 ಯಲು ಗೋಬ್ರಾ(೦)ಹ್ಮರ ವಧಿಸಿದ ಪಾ-
23 [ತಕ]ದಲು ಹೋಹರು ತಂ[ದೆ]
24 [ತಾ]ಯನು ಗಂಗೆ ತ-
25 ಡಿಯಲು ಮಧ್ಯಾನದ
26 ಹೊತ್ತ ನಲೂ ಕೊಂದ
27 ಪಾಪದಲು ಹೋಹ-
28 ರು ಸ್ವಾನಮಾಂಸ-
29 ವ ತಿಂದವರೂ [।।*]
30 ಸ್ವದತ್ತಾಂ ದ್ವಿಗುಣ[ಂ]
31 ಪು(೦)ಣ್ಯಂ ಪರದತ್ತಾ-
32 ನುಪಾಲಯೋ । ಪ-
33 ರದತ್ತಾಪಹಾರೇ-
34 ಣ (।) ಸ್ವದತ್ತಂ ನಿಷ್ಪ-
35 ಲಂ ಭವೇ-
36 ತ [।।*] ಮಂಗಳ ಮಹಾ-
37 ಶ್ರೀ ಶ್ರೀ ಶ್ರೀ [।।*]

## No. 487.

(*A.R. No.* 180 *of* 1922.)

On the west wall of the third prakara of the Kalahastisvara temple at Kalahasti, Chandragiri taluk, Chittoor district.

This is dated **Śaka 1434, Āṅgirasa, Phālguṇa, śu. 5,** corresponding to **A.D. 1513 February 10, Thursday** (not verifiable). It records that **Kṛishṇarāya-Mahārāya** made a gift of pearl neck-laces with a gold-string and precious stones, together with gold and silver plates, for *ārati* to the god **Kāḷahastīśvara** at **Kāḷahasti.**

1 ಶುಭಮಸ್ತು [।।*] ಸ್ವಸ್ತಿ ಶ್ರೀವಿಜಯಾಭ್ಯುದಯಶಾಲಿವಾಹನಶಕವರುಷಂಗಳು ೧೪೩೪ ಸಂದು ಮೇಲೆ ನಡೆವ ಆಂಗಿರ್ಸಸಂವತ್ಸರದ ಫಾಲ್ಗುಣ ಶು ೫ ಲು
2 ರಾಜಾಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರಕೃಷ್ಣರಾಯಮಹಾರಾಯರೂ ಶ್ರೀಕಾಳ-ಹಸ್ತೀಶ್ವರದೇವರಿಗೆ ಸಮರ್ಪ್ಪಿಸ್ತ ಮುತ್ತು ೬೦ ಮಧ್ಯೆ . . . . . .
3 ಕುಸುರಿ ೨ ಸಹಾ ತೂಕ ೧೮೯೧ ಗೆ ಕಂಠಮಾಲೆ ೧ ಮುತ್ತಂ ಕಂಠಮಾಲೆ ೧ ಕೆ ಮುತ್ತು ೨೦ ಮಾಣಿಕ ೧೮ ನೀಲ ೨ ತುಂಬಿದೆ ಕುಸುರಿ ೩೮ ಸಹ ತೂಂಕ ೨೩೯೪ . . . . . .
4 ಮಾಲೆ ೧ ಉಭಯಂ ಕಂಠಮಾಲೆ ೨ ಮಧ್ಯಮಾಣಿಕವಿಕ್ಕಿದ ಸಂತರ್ಧಾರೆಯ ಚಿಂನದ ಬಟ್ಟಲು ೧ ಕ್ಕೆ ತೂಂಕ ೨೦೬ ಚಿಂನದ ಪುರುಷಾಮೃಗದ ಆರತಿ ೧ ಗಿರಿಯಾರತಿ . . . . . .
5 ಕೆಂಪ್ರ ೨೪ ಪ[ಚ್ಚೆ] ೫ ಸಹಾ ಆರತಿ ೧ ಬೆ[ಳ್ಳಿ]ಯ ಆರತಿ ೨೫ ಯಿಷ್ಟನೂ ತಂಮ ಸೇವೆಯಾಗಿ ಸಮರ್ಪಿಸಿ ಚಿತ್ತಯಿಸ್ತರೂ ಮಂಗಳ ಮಹಾಶ್ರೀ ಶ್ರೀ ಶ್ರೀ ಅವಸರದ [1]

## No. 488.

(*A.R. No.* 181 *of* 1924.)

On the west wall of the third prakara of the Kalahastisvara temple at Kalahasti, Chandragiri taluk, Chittoor district.

This is dated **Śaka 1434, Āṅgirasa, Phālguṇa, śu. 5,** corresponding to **A.D. 1513 February 10 Thursday** (not verifiable), in the reign of **Kṛishṇadēva-Mahārāya.** It records that the king made a gift of a pearl neck-lace and a neck-lace of precious stones, a gold cup inlaid with precious stones, *giriy-ārati* inlaid with precious stones, a gold plate and 25 silver plates for *ārati*, to the god Kāḷahastīśvara. The inscription is written in Nāgarī characters.

[1] The inscription stops here.

1 शुभमस्तु[।।*] स्वस्ति श्रीविजयाभ्युदयशालिवाहनसकवर्षंगळु ೧೪೩೪ संदु मेले नडव आंगिरस-
संवत्सरद फाल्गुण सु ೫ लु श्रीमंन्महाराजाधिराज राजपरमेश्वर श्रीवीरप्रताप
2 श्रीवीरकिष्णरायमहारायरु श्रीकाळहस्तिश्वरदेवरिगे समर्प्पिस्त मुत्तु ೬೦ मध्यनायदनिल ೧
कुसुरि ೨ सह तूक ೧೪೨೧ गे कंठमाले ೧ मत्तं [कं*]ठमाले ೧ के मुत्तु ೨೦
माणिके ೧೪ निल ೨ तुंबिद
3 कुसुरि ೭೪ के तुक ೨೬೨೪ गे माणिकद कंठमाले ೧ उभय कंठमाले ೨ मध्यमाणिकविकिद
संतर्दारेय चिन्नद बट्टलु ೧ के ೨೨೬ चिन्नद पुर्षामृगद आरति ೧ गिरियरति ೧ के
मुत्तु ೨೦ केंपु ೨೪ पचे ೫ सहा आरति ೧
4 बेळिय आरति ೨೫ यिष्टनु तंम सेवेयागि समर्पिसि चित्तयिस्तरु मंगल महा ಶ್ರೀ ಶ್ರೀ ಶ್ರೀ [illegible]-
[illegible] [।।*]

## No. 489.

(*A.R. No.* 151 *of* 1924.)

ON THE NORTH GOPURA OF THE SAME TEMPLE.

This is damaged and dated **Śaka 1435, Śrīmukha (=A.D. 1513-14),** in the reign of **Kṛishṇadēva-Mahārāya.** It records the gift made by the king of a golden *prabhāvaḷi* set with precious stones and the grant of some villages for the service of the god Kālahastīśvara. The gift was made for the merit of his parents. The inscription gives the genealogy of the **Tuḷuva** dynasty down to Kṛishṇarāya in Sanskrit.

1 ಶುಭಮಸ್ತು [।।*] ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ [।*] ತ್ರೈಲೋಕ್ಯನಗರಾರಂಭ-
ಮೂಲಸ್ತಂಭಾಯ ಶಂಭವೇ। [।*] ಕಲ್ಯಾಣಾಯಾಸ್ತು ತದ್ಧಾಮ ಪ್ರತ್ಯೂಹತಿಮಿರಾಪಹಂ ।
ಯದ್ಗಜೋಪ್ಯ ಗಜೋದ್ಭೂತಂ ಹರಿಣಾಪಿ ಚ ಪೂ-
2 ಜ್ಯತೇ [।*] ಅಸ್ತಿ ಕ್ಷೀರಮಯಾದ್ದೇವೈರ್ಮಥ್ಯಮಾನಾನ್ಮಹಾಂಬುಧೇಃ। ನವನೀತಮಿವೋದ್ಭೂತಮ-
ಪನೀತತಮೋ ಮಹಃ ।[।*] ತಸ್ಯಾಸೀತ್ತನಯಸ್ತಪೋಭಿರತುಲೈರನ್ವರ್ಥನಾಮಾ ಬುಧಃ ।
ಪೌತ್ರಸ್ತಸ್ಯ ಪುರೂರವಾ ಭು-
3 ಜಬಲೈರಾಯುರ್ದ್ವಿಷಾಂ ನಿಘ್ನತಃ । ತಸ್ಯಾಯುರ್ನಹುಷೋಸ್ಯ ತಸ್ಯ ನಹುಷೋ ಯುದ್ಧೇ ಯಯಾತಿಃ
ಕ್ಷಿತೌ ಖ್ಯಾತಸ್ತಸ್ಯ ತು ತುರ್ವಸುರ್ವಸುನಿಭ[ಃ*] ಶ್ರೀದೇವಯಾನೀಪತೇಃ। [।*] ತದ್ವಂಶೇ ದೇವಕೀ-
4 ಜಾನಿರ್ದಿದೀಪೇ ತಿಂಮಭೂಪತಿಃ । ಯಶಸ್ವೀ ತುಳುವೇಂದ್ರೇಷು ಯದೂನಾಂ ಕೃಷ್ಣ ಇವಾನ್ವಯೇ ।[।*]
ತತೋಭೂದ್ಬುಕ್ಕಮಾಜಾನಿರೀಶ್ವರಃ ಕ್ಷಿತಿಪಾಲಕಃ ಅತ್ರಾಸಮಗುಣಭ್ರಂಶಂ ಮೌಳಿರತ್ನಂ ಮ-
5 ಹೀಭುಜಾಂ। ಪದ್ಮಾಕ್ಷೋ ಬಲಿಜಿನ್ನಿಜೈಸ್ತ್ರಿಭುವನಾಕ್ರಾಂತಿಕ್ಷಮೈರ್ವಿಕ್ರಮೈಃ ಶಂಖಂ ಚಕ್ರಮಪಿ
ಶ್ರಿಯಂ ನಿಜಕರೇ ಶ್ರೀದೇವಕೀನಂದನಃ ಭೂತ್ವಾಪ್ಯದ್ಭುತಮೀಶ್ವರೋಯಮಿತಿ ಯೋ ಭೂ-
6 ಯಸ್ತರಾಂ ಪಪ್ರಥೇ ಭೂತಿಂ ಚಾಖಿಲಪೂಜ್ಯತಾಮತಿಭೃಶಂ ಭೂಭೃತ್ಸುತಾಮಾಶ್ರಿತಃ । ಭೂಪಾಸ್ಯಕಪ-
ರೋ ನರೋ ರವಿರಿವ ಪ್ರಾಪ್ತೋದಯೋಹನ್ನಿಶಂ ಯೋ ಮಂದೇಹರಿಪೂನ-
7 ಹರ್ ಕವಿಬುಧೋಪೇತೋ ನ ಪೇತೋ ರಣಾತ್ । ಆಪೂರ್ವಾಪರವಾರಿರಾಶಿನಿತರಾಮಾಸೇತುಹೇಮಾಚಲಂ
ವಿಖ್ಯಾತೋವಿರಸಂಶಯೋ ವಿತರಣೈರ್ವಿದ್ಯೋತ-
8 ತೇ ದ್ಯೋತರೋ ।[।*] ನರಸಾಮದಭೂತ್ತಸ್ಮಾನ್ನರಸಾವನಿಪಾಲಕಃ । ದೇವಕೀನಂದನಾತ್ಕಾಮೋ
ದೇವಕೀನಂದನಾದಿವ । ಕಾವೇರೀಮಾಶು ಬಧ್ವಾ ಬಹುಳಜಲರಯಾಂ ತಾಂ ವಿಲಂಘ್ಯೈ
9 ವ ಶತ್ರುಂ ಜೀವಗ್ರಾಹಂ ಗೃಹೀತ್ವಾ ಸಮಿತಿ ಭುಜಬಲಾತ್ತಂಚ ರಾಜ್ಯಂ ತದೀಯಂ ಕೃತ್ವಾ ಶ್ರೀರಂಗ-
ಪೂರ್ವಂ ತದಪಿ ನಿಜವಶೇ ಪಟ್ಟಣಂ ಯೋ ಬಭಾಸೇ । ಕೀರ್ತಿಸ್ತಂಭಂ ನಿಖಾಯ

10 ತ್ರಿಭುವನಭವನಸ್ತೂಯಮಾನಾಪದಾನಃ । ಚೇರಂ ಚೋಳಂ ಚ ಪಾಂಡ್ಯಂ ತಮಪಿ ಚ ಮಧುರಾವಲ್ಲಭಂ
ಮಾನಭೂಷಂ ವೀರೋದಗ್ರಂ ತುರುಷ್ಕಂ ಗಜಪತಿನೃಪತಿಂ ಚಾಪಿ ಜಿ-

11 ತ್ವಾ ತದನ್ಯಾನ್ । ಆಗಂಗಾತೀರಲಂಕಾಪ್ರಥಮಚರಮಭೂಭೃತ್ತಟಾಂತಂ ನಿತಾಂತಂ ಖ್ಯಾತಕ್ಷೋಣೀ-
ಪತೀನಾಂ ಸ್ರಜಮಿವ ಶಿರಸಾಂ ಶಾಸನಂ ಯೋ ವ್ಯತಾನೀತ್ । ವಿವಿಧಸುಕೃತೋದ್ದಾಮೇ

12 ರಾಮೇಶ್ವರಪ್ರಮುಖೇ ಮುಹುರ್ಮುದಿತಹೃದಯಃ [।*] ಸ್ಥಾನೇ ಸ್ಥಾನೇ ವ್ಯಧತ್ತ ಯಥಾವಿಧಿ । ಬು-
ಧಪರಿವೃತೋ ನಾನಾದಾನಾನಿ ಯೋ ಭುವಿ ಷೋಡಶ ತ್ರಿಭುವನಜನೋದ್ಗೀತಂ ಸ್ಫೀತಂ ಯ-

13 ಶಃ ಪುನರುಕ್ತಯನ್ । ತಿಪ್ಪಾಜೀನಾಗಲಾದೇವ್ಯೋಃ ಕೌಸಲ್ಯಾಶ್ರೀಸುಮಿತ್ರಯೋಃ । ದೇವ್ಯೋರಿವ
ನೃಸಿಂಹೇಂದ್ರಾತ್ತಸ್ಮಾತ್ಪಂಕ್ತಿರಥಾದಿವ । ವೀರೌ ವಿನಯಿನೌ ರಾಮಲಕ್ಷ್ಮಣಾವಿವ ನಂ-

14 ದನೌ ಜಾತೌ ವೀರನೃಸಿಂಹೇಂದ್ರಕೃಷ್ಣರಾಯಮಹೀಪತೀ । ವೀರಶ್ರೀನಾರಸಿಂಹಸ್ಸವಿಜಯನಗರೇ
ರತ್ನಸಿಂಹಾಸನಸ್ಥಃ ಕೀರ್ತ್ಯಾ ನಿತ್ಯಂ ನಿರಸ್ಯನ್ ನೃಗನಳನಹುಷಾನಪ್ಯವನ್ಯಾಮಥಾ-

15 ನ್ಯಾನ್ । ಆಸೇತೋರಾಸುಮೇರೋರವನಿಸುರನುತಃ ಸ್ವೈರಮಾಚೋದಯಾದ್ರೇರಾಪಾಶ್ಚಾತ್ಯಾಚ-
ಲಾಂತಾದಖಿಲಹೃದಯಮಾವರ್ಜ್ಯ ರಾಜ್ಯಂ ಶಶಾಸ । ನಾನಾದಾ-

16 ನಾನ್ಯಕಾರ್ಷೀತ್ಕನಕಸದಸಿ ಯಃ ಶ್ರೀವಿರೂಪಾಕ್ಷದೇವಸ್ಥಾನೇ ಶ್ರೀಕಾಳಹಸ್ತೀಶಿತುರಪಿ ನಗರೇ ವೇಂಕ-
ಟಾದ್ರೌ ಚ ಕಾಂಚ್ಯಾಂ । ಶ್ರೀಶೈಲೇ ಶೋಣಶೈಲೇ ಮಹತಿ ಹರಿಹರೇಹೋಬಳೇ ಸಂಗ-

17 ಮೇ ಚ ಶ್ರೀರಂಗೇ ಕುಂಭಘೋಣೇ ಹತತಮಸಿ ಮಹಾನಂದಿತೀರ್ಥೇ ನಿವೃತ್ತೌ । ಗೋಕರ್ಣೇ ರಾಮ-
ಸೇತೌ ಜಗತಿ ತದಿತರೇಷ್ವಪ್ಯಶೇಷೇಷು ಪುಣ್ಯಸ್ಥಾನೇಷ್ವಾರಬ್ಧನಾನಾವಿಧಬಹಳಮ-

18 ಹಾದಾನವಾರಿಪ್ರವಾಹೈಃ । ಯಸ್ಯೋದಂಚತ್ತುರಂಗಪ್ರಕರಖುರರಜಃ ಶುಷ್ಯದಂಭೋಧಿಮಗ್ನಕ್ಷ್ಮಾ-
ಭೃತ್ಪಕ್ಷಚ್ಛಿದೋದ್ಯತ್ಕರಕುಲಿಶಧರೋತ್ಕಂಠಿತಾ

19 ಕುಂಠಿತಾಭೂತ್ । ಬ್ರಹ್ಮಾಂಡಂ ವಿಶ್ವಚಕ್ರಂ ಘಟಮುದಿತಮಹಾಭೂತಕಂ ರತ್ನಧೇನುಂ ಸಪ್ತಾಂಭೋ-
ಧೀಂಶ್ಚ ಕಲ್ಪಕ್ಷಿತಿರುಹಲತಿಕೇ ಕಾಂಚನೀಂ ಕಾಮಧೇ-

20 ನುಂ ಸ್ವರ್ಣಕ್ಷ್ಮಾಂ ಯೋ ಹಿರಣ್ಯಾಶ್ವರಥಮಪಿ ತುಲಾಪೂರುಷಂ ಗೋಸಹಸ್ರಂ ಹೇಮಾಶ್ವಂ ಹೇ-
ಮಗರ್ಭಂ ಕನಕಕರಿರಥಂ ಪಂಚಲಾಂಗಲ್ಯತಾನೀತ್ । ಪ್ರಾಜ್ಯಂ ಪ್ರ-

21 ಶಾಸ್ಯ ನಿರ್ವಿಘ್ನಂ ರಾಜ್ಯಂ ದ್ಯಾಮಿವ ಶಾಸಿತುಂ । ತಸ್ಮಿನ್ ಗುಣೇನ ವಿಖ್ಯಾತೇ ಕ್ಷಿತೀಂದ್ರೇ ದಿವಂ
ಗತೇ । ತತೋಽಪ್ಯನಾರ್ಯವೀರ್ಯಶ್ರೀಃ ಕೃಷ್ಣರಾಯಮಹೀಪತಿಃ । ಬಿಭರ್ತಿ ಸ್ಮ ಮಣಿಕೇಯೂ-

22 ರನಿರ್ವಿಶೇಷಂ ಮಹೀಂ ಭುಜೇ । ಕೀರ್ತ್ಯಾ ಯಸ್ಯ ಸಮಂತತಃ ಪ್ರಸೃತಯಾ ವಿಶ್ವಂ ರುಚೈಕ್ಯಂ ವ್ರಜೇದಿ-
ತ್ಯಾಶಂಕ್ಯ ಪುರಾ ಪುರಾರಿರಭವದ್ಭಾಲೇಕ್ಷಣಃ ಪ್ರಾಯಶಃ । ಪದ್ಮಾಕ್ಷೋಽಪಿ ಚತುರ್ಭು-

23 ಜೋಽಜನಿ ಚತುರ್ವಕ್ತ್ರೋಽಭವತ್ಪದ್ಮಭೂಃ । ಕಾಳೀ ಖಡ್ಗಮಧಾದುಮಾ ಚ ಕಮಲಂ ವೀಣಾಂ ಚ ವಾಣೀ
ಕರೇ । ಶತ್ರೂಣಾಂ ವಾಸಮೇತೇ ದಧತ ಇತಿ ರುಷಾ ಕಿಂ ನು ಸಪ್ತಾಂಬುರಾ-

24 ಶೀನ್ ನಾನಾಸೇನಾತುರಂಗತ್ರುಟಿತವಸುಮತೀಧೂಳೀಕಾಪಾಳಿಕಾಭಿಃ । ಸಂಶೋಷ್ಯ ಸ್ವೈರಮೇತ-
ತ್ಪ್ರತಿನಿಧಿಜಲಧಿಶ್ರೇಣಿಕಾ ಯೋ ವಿಧತ್ತೇ ಬ್ರಹ್ಮಾಂಡಸ್ವರ್ಣಮೇರುಪ್ರಮುಖನಿಜಮ-

25 ಹಾದಾನತೋಯೈರಮೇಯೈಃ । ಮದ್ದತ್ತಾಮರ್ಥಿಸಾರ್ಥಾಃ ಶ್ರಿಯಮಿಹ ಸುಚಿರಂ ಭುಂಜತಾಮಿತ್ಯ-
ವೇತ್ಯ ಪ್ರಾಯಃ ಪ್ರತ್ಯೂಹಹೇತೋಸ್ತ್ವನರಥಗತೇರಾಲಯಾನ್ ದೇವತಾನಾಂ

26 ತತ್ತದ್ದಿಗ್ಜೈತ್ರವೃತ್ತ್ಯಾಪಿ ಚ ಬಿರುದಪದೈರಂಕಿತಾಂಸ್ತತ್ರ ತತ್ರ ಸ್ತಂಭಾನ್ ಜಾತಪ್ರತಿಷ್ಠಾನ್ವ್ಯತನುತ
ಭುವಿ ಯೋ ಭೂಭೃದಭ್ರಂಕಷಾಗ್ರಾನ್ । ಕಾಂಚೀಶ್ರೀಶೈಲಶೋಣಾಚಲಕನಕಸಭಾ-

27 ವೇಂಕಟಾದ್ರಿಪ್ರಮುಖೇಷ್ವಾವರ್ತ್ಯಾವರ್ತ್ಯ ಸರ್ವೇಷ್ವತನುತ ವಿಧಿವತ್ ಭೂಯಸೇ ಶ್ರೇಯಸೇ ಯಃ ।
ದೇವಸ್ಥಾನೇಷು ತೀರ್ಥೇಷ್ವಪಿ ಕನಕತುಲಾಪೂರುಷಾದೀನಿ ನಾನಾದಾನಾನ್ಯನ್ಯೋಪದಾನ್ಯೈರ-

28 ಪಿ ಸಮಮಖಿಲೈರಾಗಮೋಕ್ತಾನಿ ತಾನಿ । ರೋಷಕೃತಪ್ರತಿಪಾರ್ಥಿವದಂಡಃ ಶೇಷಭುಜಕ್ಷಿತಿರಕ್ಷಣಶೌಂ-
ಡಃ [ಭಾಷೆ]ಗೆತಪ್ಪುವರಾಯರಗಂಡಸ್ತೋಷಕೃದರ್ಥಿಷು ಯೋ ರಣಚಂಡಃ । ರಾಜಾಧಿರಾಜ ಇ-

29 ತ್ಯುಕ್ತೋ ಯೋ ರಾಜಪರಮೇಶ್ವರಃ ಮೂರುರಾಯರಗಂಡಶ್ಚ ಪರರಾಯಭಯಂಕರಃ । ಹಿಂದೂರಾಯ-
ಸುರತ್ರಾಣ[ದುಷ್ಟಶಾರ್ದೂಲಮರ್ದನಃ] ಗಜೌಘಗಂಡಭೇ[ರುಂಡ] ಇತ್ಯಾದಿಬಿರುದಾನ್ವಿತಃ ।
ಆಲೋಕಯ ಮಹಾರಾಜ ಜಯ ಜೀವೇ-

30 ತಿ ವಾದಿಭಿಃ । ಅಂಗವಂಗಕಳಿಂಗಾದ್ಯೈ ರಾಜಭಿಸ್ಸೇವ್ಯತೇ ಚ ಯಃ ಸು ತ್ತ್ಯೌದಾರ್ಯಸ್ಸುಧೀಭಿಃ ಸ ವಿಜ-
ಯನಗರೇ ರತ್ನಸಿಂಹಾಸನಸ್ಥಃ ಕ್ಷ್ಮಾಪಾಲಾನ್ ಕೃಷ್ಣರಾಯಕ್ಷಿತಿಪತಿರಧರೀಕೃತ್ಯ ನಿತ್ಯಂ ನೃಗಾ-
ದೀನ್ ಆ ಪೂರ್ವಾದ್ರೇರಥಾಸ್ತಕ್ಷಿತಿಧರಕಟಕಾದಾ

31 (ದಾ)ಚ ಹೇಮಾಚಲಾಂತಾದಾಸೇತೋರರ್ಥಿಸಾರ್ಥಶ್ರಿಯಮಿಹ ಬಹಳೀಕೃತ್ಯ ಕೀರ್ತ್ಯಾ ಸಮಿಂಧೇ
ಇಹ ಕಿಲ ಜಗತಿ ನಿಖಿಲಕವಿಕುಲಾಭಿನಂದ್ಯಮಾನೌದಾರ್ಯಧೈರ್ಯಶೌರ್ಯಾದಿಜನಿತಯಶಃಪೂರಕ-
ರ್ಪೂರಪೂರಿತಬ್ರಹ್ಮಾಂಡ-

32 ಕರಂಡೇನ ಸಮರಚಂಡೇನ ವಿಹಸಿತನಲನಹುಷನಾಭಾಗಧುಂಧುಮಾರಮಾಂಧಾತೃಭರತಭಗೀರಥದಶರಥ-
ರಾಮಾದಿಚರಿತೇನ ಕೃತಭೂಸುರತ್ರಾಣೇನ ಪರಿಭೂತಸುರತ್ರಾಣೇನ ಗಜಪತಿಗಜಕೂಟಪಾಕಲೇನ
ವಿದಿತನಾನಾಕಲೇನ ವದ-

33 ನವಿಜಿತಾಂಭೋಜೇನ ಭೋಜೇನಾಪರೇಣ । ಕಾವ್ಯನಾಟಕಾಲಂಕಾರಮರ್ಮಜ್ಞೇನ ಧ(ಂ)ರ್ಮ್ಮಜ್ಞೇನ
ಪ್ರತಿವರ್ಷಪ್ರವರ್ತ್ತಿತಕನಕವಸಂತಮಹೋತ್ಸವೇನ । ಸವೇನ ಕೃತಾರ್ಥಿತವಿಪ್ರಸಾರ್ಥೇನ ಸಾರ್ಥೇನ
ನಿಖಿಲನೃಪತಿಮೂರ್ಧನ್ಯೇನ ಧ(ಂ)ನ್ಯೇನ । ನಾಗಮಾಂ-

34 ಬಿಕಾನರಸನೃಪನಂದನೇನ ನಿಖಿಲಹೃದಯಾನಂದನೇನ ಸಮರಮುಖೇ ವಿಜಯೇನ ವಿಜಯೇನ ದಿಶಾಂ
ವಿಜಯನಗರೇ ಸಿಂಹಾಸನಮಾರುಹ್ಯ ಶಾಸತಾ ಸಕಲಾಂ ಭುವಂ ಭುಜವಿಜಿತಸಾಂಪರಾಯೇಣ
ಕೃಷ್ಣದೇವಮಹಾರಾಯೇಣ

35 . . . . . . . . . ಮದಖಿಲಸುರಮುನಿಸ್ತುತಾಯ ಕಾಳಹಸ್ತೀಶ್ವರಾಯ ದತ್ತಮಿದಂ
ಧರ್ಮ್ಮಶಾಸನಂ । [।*] ಸ್ವಸ್ತಿ ಶ್ರೀಜಯಾಭ್ಯುದಯಶಾಲಿವಾಹನಶಕವರ್ಷಂಗಳು ೧೪೩೫ ಸಂದು
ಮೇಲೆ ನಡೆವ ಶ್ರೀಮುಖಸಂವ

36 . . . . . ೧೧ ಲೂ ಶ್ರೀಕಾಳಹಸ್ತೀಶ್ವರದೇವರ ಶ್ರೀ[ಭಂ]ಡಾರಕೆ ಶ್ರೀಮನ್ಮಹಾರಾಜಾಧಿರಾಜ
ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರಕೃಷ್ಣರಾಯರೂ ಸಮರ್ಪಿಸ್ತ ಧರ್ಮ್ಮಶಾಸನದ
ಕ್ರಮವೆಂತೆಂದರೆ ನಂಮ ತಂದೆ ನರ

37 . . . . . . . ಒಡೆಯರಿಗೂ ನಂಮ ತಾಯಿಗಳು ನಾಗಾಜಿಅಂಮನವರಿಗೂ ಧರ್ಮ್ಮ-
ವಾಗಿ ಶ್ರೀಕಾಳಹಸ್ತೀಶ್ವರದೇವರಿಗೆ ನವರತ್ನ[ಖಚಿ]ತವಾದ ಚಿಂನದ ಪ್ರಭಾಳಿಯನೂ ಸಮರ್ಪಿಸಿ
ದಿನ ೧ ಕಂ ಅಮೃತಪಡಿ ನೈವೇದ್ಯ ಮ

38 . . . . . ವಿನಾಯಕಪೂಜೆಗೆ ನಾರಿಕೇಳದ ಕಾಯಿ ೧ ಅಭಿಷೇಕಕ್ಕೆ ಯಾಲಕ್ಕಿ ಲವಂಗ ಚಂ
. . . ಕೋಷ್ಟ ಸಂಪಗೆ ಮುಗುಳು ಹಲ ೧೦ ಸಖರೆ ಹಲ ೧೦ ಎಳನೀರು ಬಾಳೆಹಂಣು ಜೇ

39 . . . . . . ಕಣಂಜು ೧ ಕುಂಕುಮದ ಕಣಂಜು ೨ ಕಸ್ತೂರಿ ಕಣಂಜು ៸| ತಟ್ಟುಪುನುಗು
ಕಣಂಜು ៸| ಪಂನೀರುಚೆಂಬು ಹಲ ೧ ತಿರುಮಾಲೆ ಜೋಡು ೪ ಧೂಪಕೆ ಕುಮುಂಜಾನ

40 . . . . . . . ಹಲ ೧ ತಿರುನಂದಾದೀಪಕೆ ಚಿಲುವಾನ್ಯದೀವಿಗೆ ೪೦ ಆರೋಗಣೆಗೆ ನೈವೇ-
ದ್ಯದ ಹರಿವಾಣ ೩ ಅಪ್ಪ ಪಡಿ ೧ ಕಂ ಅಪ್ಪ ೫೧ ಅತಿರಸ ಪಡಿ ೧ ಕಂ ಅತಿರಸ ೫೧ ಸುಖಿಯನ ಪಡಿ

41 . . . . . . . . ೫೦ ವಡೆ ಪಡಿ ೧ ಕಂ ವಡೆ ೫೧ ಬಿಟ್ಟು ೫೧ ಅಕ್ಕಾಳಮಡೆ ಹರಿವಾಣ ೪
ಅಡಕೆ ೫೦ ಎಲೆ ೧೦೦ ಕರ್ಪ್ಪೂರದ ಉಂಡೆ ೫ ಕಂ ಕರ್ಪ್ಪೂರದ ಕಣಂಜು ; ತಿರುಮಂದಿಕಾಪು ತಿರುಣಾಳು
ವೈಗಾಶಿ

42 . . . . ಲೂ ನಡೆಸಂಥಾ ತಿರುನಾಳಿಗೆ . . . . ಅಂಕುರಾರ್ಪಣೆ ಕಂಣಪ್ಪದೇವರ ತಿರು-
ಣಾಳು ಗಜಾರೋಹಣದಿನಕೂ ಯೆರಡನೇ ತಿರುಣಾಳು ಆರಭ್ಯ ೫ ತಿರು

43 . . . . . . . ತಿರುಣಾಳು . . . ವಸಂತ ತೋಪುಗಳ ಮಂಟಪ ಆರನೆಯ ತಿರು-
ಣಾಳು ರಥಾರೋಹಣ ಮಹೋತ್ಸಾಹಗಳಿಗೂ ೭ . . . . ಕಲ್ಯಾಣದ ತಿರುನಾಳು ತಾಂಡವ-
ಮೂರ್ತಿ ಉಚ್ಚ್ವಹದ ತಿರು

44 . . . . ದೇವರ ಉಚ್ಚ್ವಹದ ತಿರುನಾಳು ಅವಭೃತಸ್ನಾನ ವಸಂತಮಂಟಪ ೧೧ ತಿರುನಾಳು ಗೌರಿ-
ದೇವಿ ಉತ್ಸಹಂ ೧ ಮಹೋತ್ಸಹಗಳಿಗೆ ನಾಉ ಧಾರಾಪೂರ್ವ್ವಕವಾಗಿ ಪ್ರಥಮಯೇಕಾಶಿ ಪುಂಣ್ಯಕಾ

45 . . . . . . ಗ್ರಾಮ ೧ ಪಡೆನಾಡವೊಳಗಣ ಕಂಬಾ . . ಕಾಳಹಸ್ತಿದೇವ-
ರಿಗೆ ನಡದು ಬಹ ಗ್ರಾಮ . . . ನಾಉ ಬ

46 . . . . ವ್ರೊಳಗೆ ಪೊಡನೆಲ್ಲಾ . . . . . . . ಆಊರ ಗ್ರಾಮ ೧ ಆ ಗ್ರಾಮ ೪ಗೆ
ಇ ಗ್ರಾಮ ನಾಲ್ಕು ಮುಪ್ಪಾ

47 . . . . ಗಿ ಧಾರೆನೆರೆದು ಸಮರ್ಪಿಸ್ತಉ ಯಿೂ ಗ್ರಾಮ . . . . . ಹಸ್ತ್ರೀಶ್ವರದೇವರ
ಶ್ರೀಭಂಡಾರಕೆ ಆಗುವನಾಡಿಕೊಂಡು ಶ್ರೀಮುಖಸಂವ

48 . . . . . . . . . . ಅಮೃತಪಡಿನ್ನೈವೇದ್ಯಕು . . . . . . . ಂಬು ೧
ಅಭಿಷೇಕದ್ರವ್ಯ ಯಾಲಕ್ಕಿ ಚೆಂಗಳನಿ ಕೋಷ್ಟ ಲವಂಗ ಸಂಪಗೆ ಮು

49 . . . . . ತುಪ್ಪದ ಮಾನ ೧ . . . . . . ಕರ್ಪೂರದ ಕಣಂ . . . .
. . . ಕಣಂಜು ೨ ಕಸ್ತೂರಿ ಕಣಂಜು ೨ ತಟ್ಟುಪುಣುಗು ಕಣ

50 . . . . ಪಂನೀರು ಹಲ ೧ ತಿರುಮಾಲೆ ಜೋಡು ೪ ಧೂಪಕೆ ಕುಮುಂಜಾನ . . . .
ಗಂಧದಪುಡಿ ಹಲ /| ತಿರುನಂದಾದೀವಿಗೆ . . . . . . . . ವಿಗೆ ೪೦ ಆರೋಗಣೆಗೆ
ನೈವೇದ್ಯದ ಹರಿವಾಣ

52 . . . . ಪಡಿ ೧ ಅತಿರಸಪಡಿ ೧ ಸುಖಿಯನ ಪಡಿ ೧ ವಡೆ ಪಡಿ ೧ ಬಟ್ಟು ಪಡಿ ೧ ಅಕಾಳಮಡೆ ೪
ಅಡಕೆ ೫೦ ಎಲೆ ೧೦೦ ನೈಗಾಹಿತಿರುಣಾಳು ಸಂವತ್ಸರೋತ್ಸವದಲಿ ನಂಮು . . . . ಕ್ಷೇತ್ರ

52 . . . . . . . ತಿರುನಾಳು ಉತ್ಸಹ . . . . . . . . ತಿರುನಂದಾ . .
ತೋಟವನೂ ಯೀ ಸಮರ್ಪ್ಪಿಸ್ತ ನೈವೇದ್ಯಕಟ್ಟಳೆಯವ್ರೊಳಗೆ ಧಂ

53 . . . . . . . . ಗೆಯ ಪ್ರಸಾದದ ಹರಿವಾಣ ೭॥ ಉೂ ಪಡಿ ೧ ಕಂ ಕರ್ಚುಾಯ ೧೩ ಲೆಕದಲೂ
ಪಡಿ ೫ ಕಂ ಕರ್ಚುಾಯ [೨೬] ನೂ ವೀರನರಸಿಂಗರಾಯರೂ ಬಿಟ್ಟ ಚಿಕ್ಕಚೆಂಬೇಡ ಗ್ರಾಮದ

54 . . . . ಗೆ ಬಹ ನೈವೇದ್ಯದ ಹರಿವಾಣ ೫ ಉೂ ಕರ್ಚುಾಯ ೧೩ ಉೂ ಉಭೆಯಂ ಹರಿವಾಣ
೧೨ /| ಗೆ ತಿರುಮ . . . . . ರವ ಮಾಡುವ ಆಳಿನ ಜನ ೫ ಕಂ ಹರಿವಾಣ ೨ /| ನುಳಿದು

55 . . . . . . . . ೭೯ ನೂ ಅಯಿವತ್ತು ಮಂದಿ ಬ್ರಾಂಹರಿಗೆ ಚತ್ರವಾಗಿ ನಡೆವ ಮರಿಯಾದೆ-
ಯಲೂ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡಸಿಬರಲುಳುವರೂ ಎಂದು ಕೊಟ್ಟ ಧ(ಂ)ರ್ಮಶಾಸನ ॥
ಈ ಧ(ಂ)ರ್ಮ

56 . . . . . . . . ತಂಮ ತಂದೆ ತಾಯಿಗಳನೂ ವಾರಣಾಸಿಯಲಿ ಕೊಂದ ಪಾಪದಲೂ ಅನೇ-
ಕ ಬ್ರಂಹೇತಿ ಗೋಹತಿ ಸ್ತ್ರೀಹತಿ ಬ್ರೋಣಹತಿ ಮೊದಲಾದ ಮಹಾಪಾತಕಗಳನೂ ಕಾಶಿಯಲಿ
ಮಾಡಿದ ಪಾಪದಲಿ ಹೋ

57 . . . . . ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ। ಪರದತ್ತಾಪಹಾರೇಣ ಸ್ವದತ್ತಂ
ನಿಷ್ಫಲಂ ಭವೇತು ।[।*] ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ। ಷಷ್ಟಿರ್ವರ್ಷ
ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿ

58 . . . . . . . ಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ। ದಾನಾತ್ಸ್ವರ್ಗಮವಾ-
[ಪ್ನೋ]ತಿ ಪಾಲನಾದಚ್ಯುತಂ ಪದಂ ॥ ಶ್ರೀ ಶ್ರೀ ಶ್ರೀ

## No. 490.

(*A.R. No.* 687 *of* 1922).

ON A SLAB LYING IN THE GARDEN OF KARANAM NARAYANA RAO AT MUDLAPURAM, NEAR HOSPET, HOSPET TALUK, BELLARY DISTRICT.

This is dated **Śaka 1435, Śrīmukha, Chaitra, śu. 5,** corresponding to **A.D. 1513 March 12 Saturday** (not verifiable), in the reign of **Kṛishṇarāya-Mahārāya.** It records the grant of the village **Virupāpura** in **Hosaūra-māgaṇi** made by the king in the cyclic year Āṅgirasa on Phālguṇa ba. 30 Sōmavāra, Sūryagrahaṇa corresponding to A.D. 1512 March 7 Monday, for offerings to the god Viṭṭhaladēva, car-festivals, daily, fortnightly, monthly and yearly festivals. The gift was made for the merit of his father **Narasaṇṇa-Nāyaka-Voḍeya** and his mother **Nāgājidēvi-Amma.**

1 ಶ್ರೀವಿಠಲದೇವರ ಗ್ರಾಮ ವಿರುಪಾಕ್ಷಪುರ [।।*]
2 ಸ್ವಸ್ತಿ ಶ್ರೀಜಯಾಭ್ಯುದಯಶಾಲಿವಾಹನಶಕ-
3 ವರುಷ ೧೪೩೫ ನೆಯ ಶ್ರೀಮುಖಸಂವತ್ಸ-
4 ರದ ಚಯಿತ್ರ ಶುಧ ೫ ಲೂ ಶ್ರೀಮ(ಂ)ನ್ಮಹಾರಾಜಾ-
5 ಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರ
6 ಶ್ರೀಕೃಷ್ಣರಾಯಮಹಾರಾಯರೂ ಶ್ರೀವಿಠಲದೇ-
7 ವರಿಗೆ ಅಮೃತಪಡಿನೈವೇದ್ಯಕೆ ಅಂಗರಂಗ-
8 ವಯಿಭೋಗ ಫಾಲ್ಗುಣಮಾಸದ ರಥೋತ್ಸವ ವ-
9 ಯಿಶಾಖಮಾಸದ ರಥೋತ್ಸವಹ ನಿತ್ಯೋತ್ಸವ ಪ-
10 ಕ್ಷೋತ್ಸವ ಮಾಸೋತ್ಸವ ಸಂವತ್ಸರೋತ್ಸವ ನಿ-
11 ತ್ಯನೈಮಿತ್ತಿಕ ದೀಪಾರಾಧನೆ ಮೊದಲಾದ ಪು(ಂ)ಣ್ಯ-
12 ತಿಥಿಗಳು ಮಹಾಪೂಜೆ ಮಹಾನೈವೇದ್ಯಕ್ಕೆ ಸಮರ್ಪ-
13 ಸ್ತ ಹೊಸವೂರ ಮಾಗಣಿಯ ವೊಳಗಣ ವಿರುಪಾಕ್ಷಪು-
14 ರದ ಗ್ರಾಮ ೧ ನೂ ನಂಮ ತಂದೆ ನರಸಣನಾಯ-
15 ಕವೊಡೆಯರಿಗೆಯೂ ನಂಮ ತಾಯಿಗಳು ನಾಗಾಜಿ-
16 ದೇವಿಅಂಮನವರಿಗೆಯೂ ಧರ್ಮವಾಗಬೇಕೆಂದು
17 ಅಂಗಿರಸಸಂವಛರದ ಫಾಲ್ಗುಣ ಬ ೩೦ ಸೋಮವಾರದಲೂ ಸೂರ್ಯ್ಯಗ್ರಹಣಪು(ಂ)ಣ್ಯಕಾಲದಲೂ
18 ದಾನಧಾರಾಪೂರ್ವಕವಾಗಿ ಸಮರ್ಪಿಸ್ತಿಉ ಯೀ
19 ಗ್ರಾಮದಲೂ ಹುಟ್ಟುವ ರೊಕ್ಕ ಆದಾಯ ಭತ್ತ ಆದಾಯ
20 ತಳವಾಟಿಕೆ ಸುಂಕ ಸಾ(ಂ)ಮ್ಯ ಜೋಡಿ ಬಿರಾಡ ಏನು-
21 ಂಟಾದ ಆದಾಯವನೂ ಸರ್ವಮಾನ್ಯವಾಗಿ ಆಚ-
22 ಂದ್ರಾರ್ಕಸ್ಥಾಯಿಯಾಗಿ ನಡೆವ ಮರಿಯಾದೆಯೂ ದಾ-
23 ನಧಾರಾಪೂರ್ವಕವಾಗಿ ಸಮರ್ಪಿಸ್ತಿಉ ಯೀ ಧರ್ಮ-
24 ಕ್ಕೆ ಆರು ತಪ್ಪುವರೆಉ ತಂಮ ತಂದೆ ತಾಯಿಗಳ-
25 ನೂ ವಾರಣಾಸಿಯಲಿ ಕೊಂದ ಪಾಪಕ್ಕೆ ಹೋಹ-
26 ರೂ ಗೋಹತ್ಯ ಬ್ರಂಹಹತ್ಯ ಬ್ರೂಣಹತ್ಯ
27 ಪಾತಕನ ಮಾಡಿದ ಪಾಪಕ್ಕೆ ಹೋಹರೂ ಮಂಗಳ
28 ಮಹಾಶ್ರೀ ಶ್ರೀ
29 ಶ್ರೀ ಶ್ರೀ [।*]

## No. 491.

(*A.R. No.* 500 *of* 1907.)

ON A SLAB DISCOVERED IN THE UNDER-GROUND TEMPLE OF PRASANNA-VIRUPAKSHA AT HAMPI, HOSPET TALUK, BELLARY DISTRICT.

This is damaged and dated **Śaka 1435, Śrīmukha, Chaitra, śu. 5,** corresponding to **A.D. 1513 March 12 Saturday** (not verifiable), in the reign of **Kṛishṇarāya-Mahārāya.** It records that the king made a gift of certain villages (named), together with two gardens, for the service of the god **Prasanna-Virūpākshadēva**. The gift was made for the merit of his father, **Narasaṇṇa-Nāyaka**, and mother **Nāgāji-Amma.**

1 ಶುಭಮಸ್ತು । ನಮ(ಸ್)ಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ । ತ್ರೈಲೋಕ್ಯನಗರಾರಂ-
2 ಭ ಮೂಲಸ್ತಂಭಾಯ ಶಂಭವೇ ।। ಸ್ವಸ್ತಿ ಶ್ರೀಜಯಾಭ್ಯುದಯಶಾಲಿವಾಹನಸಕವರುಷ ೧೪೩೫ ನೆ-
3 ಯ ಶ್ರೀಮುಖಸಂವತ್ಸರದ ಚಯಿತ್ರ ಶು ೫ ಲು ಶ್ರೀಮ್ಮ(ಂ)ನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ-ವೀರಪ್ರತಾಪ ಶ್ರೀವೀರ-
4 ಕೃಷ್ಣರಾಯಮಹಾರಾಯರು ನ(ಂ)ಮ್ಮ ಪ[ಟ್ಟ]ದಲು ಶ್ರೀಪ್ರಸಂನವಿರೂಪಾಕ್ಷದೇವರ ಅಮೃತಪಡಿನೈ-

5 ವೇದ್ಯಕೂ ಅಂಗರಂಗವೈಭೋಗ[ಕೂ ಮಾ]ಸಪೂಜೆ ಮಾಸೋತ್ಸವ ನಿತ್ಯ ನೈಮಿತಿಕ ದೀಪಾರಾಧನೆ ಪಂಚಪ-
6 ರ್ವ ಮೊದಲಾದ ಪುಂಣ್ಯ[ಕಾಲಗ]ಳಲೂ ಮಾಡುವ ಮಹಾಪೂಜೆ ನೈವೇದ್ಯಕೂ ಸಮರ್ಪಿಸಿದ ಗ್ರಾಮ
7 ಕಂನಕಿಯಕಟಿಯ ಗ್ರಾಮ ೧ [ಪಾ]ಕಿನ ಗ್ರಾಮಗಳು ಬುಕ್ಕಾಪುರದ ಗ್ರಾಮ ೧ ಮೆಟರೆಯ ಹ-
8 ತ್ತಿರಣ ನಾಗಲಾಪುರದ ಗ್ರಾಮ ೧ ಉಭಯಂ ಪಾಕಿನ ಗ್ರಾಮ ೨ ತೋಟಗಳು ಅಂಣಾಜಿಯ
9 ಹೋಬಳಿಯ ತೋಟ ೧ ಕಂ ಬೀಜವರಿ ಖ ೧ ಭೂಪತಿಯ ಕೆಱೆಯಲೂ ಗುಲು ಸೂಪ್ರ ತೋ-
10 ಟದ ಸ್ಥಳ ೨ ಸಾಳುವಗೇರಿಯಲೂ ಸಲುವ ತೋಟ ೧ ಕಂಬಿ ೯೨ ಗೌರಾಜಿಯ ಕೆಱೆಯ ಗ್ರಾಮ
11 ೧ ಅಂತು ಗ್ರಾಮ ೪ ತೋಟ ೩ ಮಾನ್ಯಗಳು ವಡುನೆಣ ರಾಮಾಪುರದಲೂ ಸಲುವ ಮಾನ್ಯ ೧ ಕಂ ಬೀಜ-
12 ವರಿ ಖ ೧ ಅಂತಾಪುರದಲೂ ಸಲುವ ಮಾನ್ಯ ೧ ಕಂ ಬೀಜವರಿ ೯ ೧ ಉಭಯಂ ಮಾನ್ಯ ೨ ಕಿವಪುರದಲು
13 ಸಲುವ ಮಾನ್ಯ ೧ ಕಂ ಬೀಜವರಿ ಖಂ ೧೦ ಅಂತು ಮಾನ್ಯ ೩ ಉತ್ತಿಗಳು ಎರೇಉರ ಅಗ್ರಹಾರದಲೂ [ಸ]-
14 ಲುವ ಉತ್ತಿ ೧ ವ್ರೋರುವಾಯ ಅಗ್ರಹಾರದಲು ಸಲುವ ಉತ್ತಿ ೧ ಉಭಯಂ ಉತ್ತಿ ೨ ಅಂ-
15 ತು ಗ್ರಾಮ ೪ ತೋಟ ೩ ಮಾನ್ಯ ೩ ಉತ್ತಿ ೨ ನಾಗಲಾಪುರದ ಗ್ರಾಮಕೆ ಸಲುವ ಕಾಲುವೆ ೪ ಸಹಾ
16 ಸಕಲ ಸುವರ್ಣಾದಾಯ ಸಕಲ ಭತ್ತ ಆದಾಯ ಸ್ಥಳದ ಸುಂಕ ಸಾಮ್ಯ ತಳವಾಱಿಕೆಯ ರೊಕ ಭತ ಜೋ-
17 ಡಿ ಬಿರಾಡ ಗ್ರಾಮಗಳ ನೀರ ಬಿರಾಡ ಅನುಪ್ರ ಹಾರಿಕಾಯಿ ಮೊದಲಾದ ಏನುಂಟಾದನು ಸ-
18 ರ್ವಮಾನ್ಯವಾಗಿ ನಂಮ ತಂದೆ ನರಸಣನಾಯಕವೊಡೆಯರಿಗೂ ನಂಮ ತಾಯಿ ನಾಗಾಜಿಅಂಮ-
19 ನವರಿಗೂ ಪು(ಂ)ಣ್ಯವಾಗಿ ಸೂರ್ಯಗ್ರಹಣ ಪುಂಣ್ಯಕಾಲದಲೂ ಆಚಂದ್ರಾರ್ಕಸ್ಥಾಯಿಯಾ-
20 ಗಿ ನಡವ ಹರಿಯಾದೆಯಲು ಸಮರ್ಪಿಸಿದೆಉ ಯೀ ಧರ್ಮಕ ಆರೊಬರು ತಪ್ಪಿದರೆ ತ(ಂ)ಮ್ಮ ತಾಯಿತಂ-
21 ದೆಯ ವಾರಣಾಸಿಯಲಿ ಕೊಂದ ಪಾಪದಲೂ ಹೋಹರು ಗೋಹತ್ಯ ಬ್ರಂಹತ್ಯ ಸ್ತ್ರೀಹತ್ಯ ಬ್ರು-
22 ಣಹತ್ಯ ಅಶ್ವೇತಿಗಳ ಮಾಡಿದ ಪಾಪಕ್ಕೆ ಹೋಹರು [।।*]

## No. 492.

(*A.R. No.* 161 *of* 1924.)

ON THE WEST WALL OF THE THIRD PRAKARA OF THE KALAHASTISVARA TEMPLE AT KALAHASTI, CHANDRAGIRI TALUK, CHITTOOR DISTRICT.

This is dated **Śaka 1435, Śrīmukha, Jyēshṭha, śu. 7, Saumyavāra** corresponding to **A.D. 1513 May 11 Wednesday,** in the reign of **Kṛishṇarāya-Mahārāya.** It records the gift of a pendant (*padaka*) consisting of various precious stones presented by the king to the god Kāḷahastīśvara.

1 ಸ್ವಸ್ತಿ ಶ್ರೀ [।।*] ವಿಜಯಾಭ್ಯುದಯಶಾಲಿವಾಹನಶಕವರುಷಂಗಳು ೧೪೩೫ ಸಂದು ಮೇಲೆ ನಡವ ಶ್ರೀ-ಮುಖಸಂವತ್ಸರದ ಜೇಷ್ಠ ಶುಧ ೭ ಸೌಮ್ಯ-
2 ವಾರದಲು ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪ ಶ್ರೀವೀರಕೃಷ್ಣರಾಯ-ಮಹಾರಾಯರೂ ಶ್ರೀಕಾಳಹಸ್ತಿಯೀಶ್ವ-
3 ರದೇವರಿಗೆ ಸಮರ್ಪಿಸ್ತ ಪದಕ ೧ ಕಂ ಮುತ್ತು ೬೧ ಪಚೆ [೩] [ಕಂ]ಪು ೧೨ ವೈಡೂರಿಯ ೪ ನೀಳ-ಯ ಗ ೩೭ ಸಹ ತೂಕ ಹ ೧ ಕಂಠ . . . ೧ ಕಂ
4 ತೂಕ ಗ ೨೪೯ ೨ ಉಭಯಂ ತೂಕ ಗ ೭೧೯ ೨ ಕಂ ಪದಕ ೧ ಯೀ ಪದಕವನೂ ತಮ್ಮ ಸೇವೆಯಾಗೆ ಸಮರ್ಪ[ಸಿ] ಚಿತ್ತೈಸ್ತರು ಮಂಗಳ ಮಹಾಶ್ರೀ [।।*]

## No. 493.

(*A.R. No.* 714 *of* 1922.)

ON BOTH SIDES OF THE SOUTHERN ENTRANCE OF THE TEMPLE OF VIRUPAKSHA AT HAMPI, HOSPET TALUK, BELLARY DISTRICT.

This is dated **Śaka 1435, Śrīmukha, Āshāḍha, śu. 5,** corresponding to **A.D. 1513 June 8 Wednesday** (not verifiable), in the reign of **Kṛishṇadēvarāya-Mahārāya.** It records the grant of some villages (named) and of the gift of gold vessels and plates by the kin for the service of the god Virūpākshadēva. The gift is stated to have been

made on the occasion of a solar eclipse for his own well-being as well as for the merit of his father **Narasaṇa-Nāyaka** and his mother **Nāgāji-Amma.**

1 ಶ್ರೀವಿರೂಪಾಕ್ಷದೇವರು ||
2 ನಮಸ್ತುಂಗಶಿರಶ್ಚುಂಬಿಚಂ-
3 ದ್ರಚಾಮರಚಾರವೇ[।*] ತ್ರೈಲೋಕ್ಯನ-
4 ಗರಾರಂಭಮೂಲಸ್ತಂಭಾಯ
5 ಶಂಭವೇ ।[।*] ಸ್ವಸ್ತಿ ಶ್ರೀ ಜಯಾಭ್ಯು-
6 ದಯಶಾಲಿವಾಹನ(ಹನ)ಶಕವರುಷ
7 ೧೪೩೫ ನೆಯ ಶ್ರೀಮುಖಸಂವಛರದ
8 ಆಷಾಢ ಶು ೫ ಲು ಶ್ರೀಮತು ಶ್ರೀಮನ್ಮಹಾ-
9 ರಾಜಾಧಿರಾಜ ರಾಜಪರಮೇಶ್ವರ ಶ್ರೀ-
10 ವೀರಪ್ರತಾಪ ಶ್ರೀವೀರಕೃಷ್ಣದೇವಮ-
ಹಾ-
11 ರಾಯರೂ ಶ್ರೀವಿರೂಪಾಕ್ಷದೇವರಿಗೆ ಅ-
12 ಮೃತಪಡಿ ನೈವೇದ್ಯಕೂ ಅಂಗರಂಗವೈ-
13 ಭೋಗ ನಿತ್ಯನಯಿಮಿತಿಕ ಚೈ-
14 ತ್ರಮಾಸದ ರಥೋತ್ಸವ ಮಕರಸಂಕ್ರಾಂ-
15 ತಿಯ ರಥೋತ್ಸವ ಮಾಸೋತ್ಸವ ಪಕ್ಷೋ-
16 ತ್ಸವ ಸಂವತ್ಸರೋತ್ಸವ ದೀಪಾರಾ-
17 ಧನೆ ಪಂಚಪರ್ವ ಮೊದಲಾದ ಪು(ಂ)ಣ್ಯ-
18 ತಿಥಿಗಳೂ ಮಹಾಪೂಜೆಗಳಿಗೂ ಸ[ಮ]-
19 ರ್ಪಿಸಿದು ಶ್ರೀಕೃಷ್ಣರಾಯಮಹಾ-
20 ರಾಯರ ಪಟ್ಟದಲೂ ಬಿಟ್ಟ ಚಿಂನನಾ-
21 ಯಕನಹಳ್ಳಿ ಗ್ರಾಮ ೧ ಪ್ರಾಕು ಸಲು-
22 ವ ಗ್ರಾಮಗಳೂ ಕಾಳಗಟ್ಟಿಯ ಗ್ರಾ ೧
23 ದಣಾಯಕಪುರದ ಗ್ರಾಮ ೧ ರಾಮ-
24 ಚಂದ್ರಾಪುರದ ಗ್ರಾಮ ೧ ಕಂಚು-
25 ಮಂತಿನಕಟೆ ಗ್ರಾಮ ೧ ಅಯೋಧಿ ಗ್ರಾ
೧
26 ಹೊಂನಾಪುರದ ಗ್ರಾಮ ೧ ವಿಜೆಯ ನಿ
27 . . ಪುರದ ಗ್ರಾಮ ೧ ಮಂಡನೂರ
28 ಗ್ರಾಮಗಳೂ ದೆಂಮೂರ ಗ್ರಾಮ ೧ ಭೈ-
29 ಯಿರವದೇವನಹಳಿಯ ಗ್ರಾಮ ೧ ಕಲು-
30 ಕಂಭದ ಗ್ರಾಮ ೧ ಗೋನಹಾಳ ಗ್ರಾ ೧
31 ಗುಂಡಿಗನೂರ ಗ್ರಾಮ ೧ ಪಾಡಿರಾಲ
32 ಗ್ರಾಮ ೧ ಮುದಗೆಡೆಯ ಗ್ರಾಮ ೧
33 ವ್ರಿತ್ತಿ ಮಾನ್ಯ ಕೋಟಿಗಳೂ ಸಹಾ
34 ಸಕಲ ಭತ್ತಾದಾಯ ಸಕಲ ಸುವರ್ನಾ-
35 ದಾಯ ಸಕಲ ಸಾ(ಂ)ಮ್ಯ ಜೋಡಿ ಬಿರಾ-
36 ಡ ಸುಂಕ ಸಾ(ಂ)ಮ್ಯ ಕಟು ತ-
37 ಳವಾಱಕೆ ಜೋಡಿಕೆಯ ಬಿರಾ
38 ಡ ಕಾಲುವೆಯ ನೀರ ಬಿರಾಡ
39 ಸಹವಾಗಿ ಏನುಂಟಾದನು
40 ಸರ್ವಮಾ(ಂ)ನ್ಯವಾಗಿ ನಂಮ ತಂ-
41 ದೆ ನರಸಣನಾಯಕವೊಡೆ[ಯ*]ರಿಗೆಉ
ನಂಮ
42 ತಾಯಿ ನಾಗಾಜಿಅಂಮನವರಿಗೆಉ ಧ-
43 ರ್ಮ್ಮವಾಗಿ ಸೂರ್ಯ್ಯಗ್ರಹಣಪು(ಂ)ಣ್ಯ-
ಕಾ-
44 ಲದಲು ಆಚಂದ್ರಾರ್ಕ್ಕಸ್ಥಾಯಿಯಾಗಿ
45 ನಡವ ಹಾಗಿಯಾದಲು ಧಾರೆನೆಱ-
46 ದು ಸಮರ್ಪಿಸ್ತಉ ಯೀ ಧರ್ಮ್ಮಕೆ ಅ-
47 ರೊಬರು ತಪಿದರೆ ತಂಮ ತಂದೆ ತಾಯಿಗ-
48 ಳ ವಾರಣಾಸಿಲಿ ಕೊಂದ ಪಾಪಗಳಿಗೆ
49 ಹೋದವರು ಗೋಹತ್ಯಾಪಾತಕಗಳೂ
ಬ್ರ-
50 (ಂ)ಹ್ಮಹತ್ಯಾಪಾತಕ ಸ್ತ್ರೀಹತ್ಯಾಪಾತಕ
51 ಭ್ರೂಣಹತ್ಯಾಪಾತಕಗಳೂ ಮೊದಲಾ-
52 ಗ ಅಕ್ಷೋತಿ ಮೊದಲಾದ ಮಹಾಪಾಪಕ್ಕೆ
53 ಹೋಹರು [।*] ಶ್ರೀಕೃಷ್ಣರಾಯರೂ
ಶ್ರೀವಿ-
54 ರೂಪಾಕ್ಷದೇವರಿಗೆ ಸ[ಮ*]ರ್ಪಿಸಿದ ನಾ-
55 ಗಾಭರಣ ೧ ನವರತ್ನದ ತಾವರೆಕಮ-
56 ಲ ೧ ಚಿ(ಂ)ನ್ನದ ಹರಿವಾಣ ೧ ಚಿನ್ನದ
57 ಆರತಿ ಹಲಗೆ ೨ ಬೆಳ್ಳಿಯ ಆರತಿಯ
58 ಹಲಗೆ ೩೪ ಯಿೂ ಆರತಿಗಳನು ಕೃಷ್ಣರಾ-
59 ಯಮಹಾರಾಯರೂ ನಮಗೆ ಧರ್ಮ್ಮವಾ-
ಗಬೇ-
60 ಕೆಂದು ಸಮರ್ಪ್ಪಿಸಿದೆಉ ||

## No. 494.

(*A.R. No.* 309 *of* 1905.)

ON A PILLAR WITHIN THE ANTARALA-MANDAPA OF THE CHANNAKESAVASVAMI TEMPLE AT PUSHPAGIRI, CUDDAPPAH TALUK, CUDDAPPAH DISTRICT.

This is dated **Śaka 1436, Bhāva, Chaitra, śu. 1, Sōmavāra** corresponding to **A.D. 1514 March 27, Monday,** in the reign of **Kṛishṇarāya-Mahārāya.** It records that the king made a gift of the village **China-Māṁchupalli** in **Charnnūra-sīme**, a subdivision of **Mulikināḍa-sīme** for the service and offerings of the god Channakēśava of **Pushpagiri.**

1 ಸ್ವಸ್ತಿ [।।*] ಶ್ರೀಜಯಾಭ್ಯುದಯಶಾಲಿವಾಹ-
2 ನಶಕವರ್ಷಂಬುಲು ೧೪೩೬ ಸಂದ ಮೇಲೆ ನಡವ
3 ಭಾವಸಂವತ್ಸರದ ಚಯಿತ್ರ ಶು ೧ ಸೋ ಲೂ
4 ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವ-
5 ರ ಶ್ರೀವೀರಪ್ರತಾಪ ಶ್ರೀಕೃಷ್ಣರಾಯಮಹಾರಾ-
6 ಯರು ಪುಷ್ಪಗಿರಿಯ ಚನ್ನಕೇಶವದೇವರಿಗೆ ಕೊಟ್ಟ ಗ್ರಾ-
7 ಮದ ಧರ್ಮಶಾಸನ ಚನ್ನಕೇಶವದೇವರ ಪೂಜೆ ಪುನ-
8 ಸ್ಕಾರ ಅಮೃತಪಡಿ ನಯಿವೇದ್ಯಕ್ಕೆ ಮುಲಿಕಿನಾಂಡ
9 ಶೀಮೆಯೊಳಗೆ ಚನೂರಸೀಮೆ ಯೊಳಗಣ ಚಿನ-
10 ಮಾಂಚುಪಲಿ ಗ್ರಾಮವನೂ ತಥಾತಿಥಿ ಮನ್ವಾದಿಪುಣ್ಯಕಾ-
11 ಲದಲು ಸಹಿರಣ್ಯೋದಕದಾನಧಾರಾಪೂರ್ವಕವಾಗಿ ಸ-
12 ಮರ್ಪಿಸ್ತವು ಆ ಚಿನಮಾಂಚುಪಲಿಯ ಗ್ರಾಮದ ಚತುಸ್ಸೀಮೆ-
13 ಗೆ ಯೊಳಗಾದ ಗದ್ದೆ ಬೆದಲು ತೋಟ ತುಡಿಕೆ ನಿಧಿ ನಿಕ್ಷೇಪ ಜಲ
14 ಪಾಷಾಣ ಅಕ್ಷೀಣಿ ಆಗಾಮಿ ಸಿದ್ಧ ಸಾಧ್ಯಗಳೆಂಬ ಅಷ್ಟಭೋ-
15 ಗ ತೇಜಸ್ಸ್ವಾಮ್ಯ ವಿನುಂಟಾದನೂ ಆಗುಮಾಡಿಕೊಂಡು । ಚನ್ನ-
16 ಕೇಶವದೇವರ ಪೂಜೆ ಪುನಸ್ಕಾರ ಅಮೃತಪಡಿ ನಯಿವೇದ್ಯವ-
17 ನೂ ಚನ್ನಾಗಿ ನಡಸಲುಳವರು ಎಂದು ಕೊಟ್ಟ ಧರ್ಮಶಾ-
18 ಸನವು ಶ್ರೀವಿರೂಪಾಕ್ಷ । ಮಂಗಳ ಮಹಾಶ್ರೀ ಶ್ರೀ
19 ದಾನಪಾಲನಯೋರ್ಮಧ್ಯೇ ದಾನಾತ್ಶ್ರೇಯೋನುಪಾಲನಂ ದಾನಾ-
20 ತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ।। ಸ್ವದತ್ತಾದ್ದ್ವಿ-
21 ಗುಣಂ ಪುಣ್ಯಂ ಪರದತ್ತಾನುಪಾಲನಂ ಪರದತ್ತಾಪಹಾರೇಣ
22 ಸ್ವದತ್ತಂ ನಿಷ್ಫಲಂ ಭವೇತ್ ।। ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ
23 ವಸುಂಧರಾಂ ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ।।

## No. 495.

(*A.R. No.* 330 *of* 1905.)

ON A SLAB LYING IN FRONT OF THE ANJANEYA TEMPLE AT CHINAMASAPALLE, CUDDAPAH TALUK, SAME DISTRICT.

This is dated **Śaka 1436, Bhāva, Chaitra, śu. 1, Sōmavāra** corresponding to **A.D. 1514 March 27 Monday,** in the reign of **Kṛishṇarāya-Mahārāya.** It records that the king made a gift of the village **Chika-Māñchupalli** in **Chenūri-sīme** a sub-division of **Mulukināḍu-sīme,** for the service of the god Channakēśavadēva at **Pushpagiri.**

1 ಸ್ವಸ್ತಿ [।।*] ಜಯಾಭ್ಯುದಯಶಾಲಿವಾಹ-
2 ನಶಕವರ್ಷಂಬುಲು ೧೪೩೬ ಸಂದ ಮೇಲೆ
3 ನಡದ ಭಾವಸಂವತ್ಸರದ ಚೈತ್ರ ಶು ೧ ಸೋ
4 ಲೂ ಶ್ರೀಮನುಮಹಾರಾಜಾಧಿರಾ-
5 ಜ ಪರಮೇಶ್ವರ ಶ್ರೀವೀರಪ್ರತಾಪ ಶ್ರೀಕುಷ್ಣರಾ-
6 ಯಮಹಾರಾಯರು ಪುಷ್ಪಗಿರಿಯ ಚ(ಂ)-
7 ನ್ನ ಕೇಶವದೇವರಿಗೆ ಕೊಟ ಗ್ರಾಮದ ಧರ್ಮಶಾ-
8 ಸನ ಚನ್ನಕೇಶವದೇವರಿಗೆ ಪೂಜೆ ಪುನಸ್ಕಾರ ಅ-
9 ಮೃತಪಡಿ ನಯಿವೇದಕೆ ಮುಲುಕಿನಾಟಿ ಶೀಮೆ ಯೊ-
10 ಳಗೆ ಚೆನೂರಿಶೀಮೆ ಒಳಗಣ ಚಿಕಮಾಂಚುಪಲ್ಲಿ ಗ್ರಾಮ-
11 ವನೂ ತಥಾತಿಥಿ ಮನ್ವಾದಿ ಪು(ಂ)ಣ್ಯಕಾಲದಲು ಸಹಿರ(ಂ)-
12 ಣ್ಯೋದಕದಾನಧಾರಾಪೂರ್ವಕವಾಗಿ ಸಮರ್ಪಿಸ್ತ-
13 ವು । ಆ ಚಿಕಮಾಂಚುಪಲ್ಲಿಯ ಗ್ರಾಮದ ಚತುಸೀ-

14 ವೆಗೆ ಒಳಗಾದ ಗದೆ ಬೆದಲು ತೋಟ ತುಡಿಕೆ ನಿಧಿ ನಿಕ್ಷೇಪ
15 ಜಲ ಪಾಷಾಣ ಅಕ್ಷೀಣಿ ಆಗಾಮಿ ಸಿಧ ಸಾಧ್ಯಗಳೆಂಬ
16 ಅಷ್ಟಭೋಗ ತೇಜ ಸ್ವಾಸ್ವಾಮ್ಯ ವಿನುಂಟಾದನೂ ಆಗುಮಾಡಿ-
17 ಕೊಂಡು ಚೆಂನಕೇಶವದೇವರ ಪೂಜೆ ಪುನಸ್ಕಾರ ಅಮೃ-
18 ತಪಡಿ ನಇವೇದ್ಯವನೂ ಚೆಂನಾಗಿ ನಡಸಲುಳ್ಳವರು ಯೆ-
19 ಂದು ಕೊಟ ಧರ್ಮಶಾಸನ । ಶ್ರೀವಿರೂಪಾಕ್ಷ ॥
20 ಮಂಗಳ ಮಹಾಶ್ರೀ ಶ್ರೀ ಜೇಯು(ಂ)ನು ॥ ದಾನಪಾಲನ-
21 ಯೋರ್ಮಧ್ಯೇ ದಾನಾತ್ ಶ್ರೇಯೋನುಪಾಲನಂ । ದಾನಾತ್ಸ್ವರ್ಗ-
22 ಮವಾಪ್ನೋತಿ ಪಾಲನಾದಚ್ಯುತಂ ಪದಂ ॥ ಸ್ವದತ್ತಾದ್ದ್ವಿ-
23 ಗುಣಂ ಪುಣ್ಯಂ ಪರದತ್ತಾನುಪಾಲನಂ । ಪರದತ್ತಾಪ-
24 ಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ । ಸ್ವದತ್ತಂ ಪರ-
25 ದತ್ತಂ ವಾ ಯೋ ಹರೇತ ವಸುಂಧರಾಂ ಷಷ್ಟಿರ್ವರ್ಷಸ-
26 ಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ ॥

## No. 496.

(*A.R. No.* 385 *of* 1904.)

ON TWO FACES OF A PILLAR SET UP IN THE RAMALINGESVARA TEMPLE AT RAMESVARAM, NEAR PRODDATURU, PRODDATURU TALUK, SAME DISTRICT.

This is dated **Śaka 1436, Bhāva, Chaitra, śu. 1, Sō[mavāra]** corresponding to **A.D. 1514 March 27 Monday.** It records that king **Kṛishṇarāya-Mahārāya** made a gift of the village **Payiṇḍāle** in **Chernūra-sīme** for the service of the god **Rāmayadēva** at **Mahā-Rāmēśvara** in **Ghaṇḍikōṭeya-sīme.**

1 ಶುಭಮಸ್ತು [।।*] ಸ್ವಸ್ತಿ ಶ್ರೀಜಯಾ-
2 ಭ್ಯುದಯಶಾಲಿವಾಹನಶಕವರು-
3 ಷ ೧೪೩೬ ಸಂದ ಮೇಲೆ ನಡೆವ ಭಾವಸಂ-
4 ವತ್ಸರದ ಚಯಿತ್ರ ಶು ೧ ಸೋ ಲೂ
5 ಶ್ರೀಮ(ಂ)ನ್ಮಹಾರಾಜಾಧಿರಾಜ ರಾ-
6 ಜಪರಮೇಶ್ವರ ಶ್ರೀವೀರಪ್ರತಾಪ ಶ್ರೀ-
7 ಕ್ರುಷ್ಣರಾಯಮಹಾರಾಯರು
8 ಘಂಡಿಕೋಟೆಯ ಸೀಮೆಯಲೂ
9 ಮಹಾರಾಮೇಶ್ವರದ ರಾಮ್ಯದೇ-
10 ವರಿಗೆ ಕೊಟ ಗ್ರಾಮದ ಧರ್ಮಶಾ-
11 ಸನ ರಾಮಯದೇವರ ಪೂಜೆ ಪುನ-
12 ಸ್ಕಾರ ಅಮ್ರುತಪಡಿ ನೈವೇದ್ಯಕೆ ಚೆನೂರ್-
13 ರ ಸೀಮೆಯೊಳಗಣ ಪಯಿಂಡಾಲೆ ಗ್ರಾ-
14 ಮವನೂ ತಥಾತಿಥಿಮ(ಂ)ನ್ವಾದಿ ಪು-
15 ಣ್ಯಕಾಲದಲೂ ಸಹಿರ(ಂ)ಣ್ಯೋದ-
16 ಕದಾನಧಾರಾಪೂರ್ವಕವಾಗಿ ಸಮರ್ಪಿಸಿ-
17 ದರು ಆ ಪಯಿಂಡಾಲೆ ಎಂಬ ಗ್ರಾಮ-
18 ದ ಚತುಸ್ಸೀಮೆಗೆ ವೊಳಗಾದ ಗದ್ದೆ ಬೆ-
19 ದಲು ತೋಂಟ ತುಡಿಕೆ ನಿಧಿ ನಿಕ್ಷೇ-
20 ಪ ಜಲ ಪಾಷಾಣ ಅಕ್ಷೀಣ ಆಗಾಮಿ ಸಿ-
21 ದ್ಧ ಸಾಧ್ಯಗಳೆಂಬ ಅಷ್ಟಭೋಗ ತೇಜ-
ಸ್ವಾಸ್ವಾ-
22 ಮ್ಯ ವಿನು ಉಂಟಾದನು ಆಗುಮಾಡಿಕೊ-
23 ಂಡು ರಾಮೇಶ್ವರ ರಾಮಯದೇವರ
24 ಪೂಜ ಪುನಸ್ಕಾರ ಅಮೃತಪಡಿ ನಯಿ-
25 ವೇದ್ಯವನೂ ಚೆಂನಾಗಿ ನಡಸಲುಳ್ಳವ-
26 ರೂ ಎಂದು ಕೊಟ್ಟ ಧರ್ಮಶಾಸನ ॥
27 ದಾನಪಾಲನಯೋರ್ಮಧ್ಯೇ ದಾ-
28 ನಾಚ್ಛ್ರೇಯೋನ್ಯಪಾಲನಂ । ದಾನಾತ್ಸ್ವ-
29 ರ್ಗಮವಾಪ್ನೋತಿ ಪಾಲನಾದಚ್ಯು-
30 ತಂ ಪದಂ ॥ ಸ್ವದತ್ತಾದ್ದ್ವಿಗುಣ-
31 ಂ ಪು(ಂ)ಣ್ಯಂ ಪರದತ್ತಾನುಪಾಲನಂ
32 ಪರದತ್ತಾಪಹಾರೇಣ ಸ್ವದತ್ತಂ
33 ನಿಷ್ಫಲಂ ಭವೇತ್ । ಶ್ರೀವಿರೂಪಾಕ್ಷ ॥

## No. 497.

(*A.R. No.* 196 *of* 1918.)

ON A SLAB SET UP NEAR THE MARAMMA TEMPLE AT TAGARAPURAM, KOLLEGAL TALUK, COIMBATORE DISTRICT.

This is dated **Śaka 1437, Bhāva, Chaitra, ba. 5, Śukravāra** corresponding to **A.D. 1514 April 14 Friday,** in the reign of the Vijayanagara king **Kṛishṇa-Dharma-Mahādhi-**

**rāya** (Krishṇadēva-Mahārāya). It records the grant of the village **Tagavūru** to **Sōmayyadēva-Voḍeya,** son of **Bālodeya** of **Mōgūru,** by **Sāḷuva Gōvindarāja,** made with the consent of his elder brother, the *Mahāpradhāna* **Sāḷuva Timmarasa,** under the orders of the king. The king is stated to be the son of **Narasiṁha-Dharma-Mahārāja.** The donee's grandfather **Sōmēśvarāchārya,** also called Mallikārjuna, was the *guru* of **Vīra-Rudra** of **Ōruṅgal.**

1 ಸ್ವಸ್ತಿ [॥*]ಸಮಸ್ತಭುವನಾಶ್ರಯ ಪೃಥ್ವೀವಲ್ಲಭ ಶ್ರೀಮನ್ಮಹಾರಾಜಾ-
2 ಧಿರಾಜ ರಾಜಪರಮೇಶ್ವರ ಶ್ರೀಮನ್ಮಹಾಮೇದಿನೀಮೀಸರಗಂಡ ಕಠಾರಿಸಾಳುವ ಶ್ರೀಮದ್ದಕ್ಷಿಣಸ-
3 ಮುದ್ರಾಧಿಪತಿ ನಾರಸಿಂಹಧರ್ಮ್ಮಮಹಾರಾಜತನೂಭವ ಪ್ರಬಲಪ್ರತಾಪ ಸಕಲಭೂ-
4 ಮೀಶ್ವರನಿಕರಮಕುಟವಿನ್ಯಸ್ತಚರಣಾರವಿಂದಯುಗಲ ಸರ್ವ್ವಭುವನಪ್ರಚಾರಕಂತೂಹಲಿ-
5 ತಕೀರ್ತ್ತಿ ಕುಲದೇವತಾಸಹಚರ ಪರಾಕ್ರಮಪ್ರಸೂತಿ ಪ್ರಥಮಪ್ರಜಾಪತಿ ದುರ್ದ್ಧರವೈರಿವಕ್ಷಸ್ಥಲ-
6 ದಲನ ಗಲದ್ಧಾರಾರುಧಿರೋಪಹಾರದುರ್ಲಲಿತವೀರಲಕ್ಷ್ಮೀಸಮಾಕರ್ಷಣಮಂತ್ರ ಪಿತ್ರ[ನ್ವಾ]-
7 ಗತಸಮಸ್ತವಿಬುಧವರಸಂದೋಹಾನಂದಕರಣವಿಚಾರವಿಶಾರದ ಶ್ರೀಮತ್ಕೃಷ್ಣಧರ್ಮ-
8 ಮಹಾಧಿರಾಯಂ ಸಮಸ್ತಪೃಥ್ವೀರಾಜ್ಯಂಗೆಯ್ಯುತ್ತಿರಲಾ ರಾಯರ ನಿರೂಪದಿಂ ತ-
9 ನ್ಮಹಾಪ್ರಧಾನ ಸಾಳುವ ತಿಂಮರಸವರ್ಮ್ಮನುಮತದಿಂ ತದನುಜ ಸಾಳುವ ಗೋವಿಂದರಾಜಗ-
10 ಳು ಶಕವರ್ಷ ೧೪೩೭ ನೆಯ ಭಾವಸಂವ[ತ್ಸ]ರದ ಚೈತ್ರ ಬ ೫ ಶುಕ್ರವಾರದಲೂ [॥*] ಓರುಂಗಲ್ಲಾ-
11 ಭಿಧೇಯಪ್ರವರಪುರವರೋ ವೀರರುದ್ರಾವನೀಶೋ ಭೃಂಗೀಯತ್ಯಂಘ್ರಿಯುಗ್ಮೇ ಭುವಿ ಸರ-
12 ಸಿರುಹೇ ಯಸ್ಯ ವಿದ್ಯೋದಯಸ್ಯ । ವಾಣೀ ಭೇದಾತ್ಮವಾದ್ಯುದ್ಧತಮದಕಲಕುಂಭಸ್ಥಳೀಯಾಂಕುಶೀ
13 ಯತ್ಯಾರ್ಯ್ಯಶ್ರೀಮಲ್ಲಿಕಾರ್ಜ್ಜುನಗುರುರಭಿನೋ[ತ್ಸಾ]ತ್ತಪೂರ್ವ್ವಃ ಸಮಾಸೀತ್ ॥ ತಸ್ಯ ಸೋ-
ಮೇಶ್ವರಾಚಾ-
14 ರ್ಯ್ಯವರ್ಯ್ಯಸ್ಯ ತನಯೋಭವತ್ ಸಕಲಾಗಮಸಂಪನ್ನೋ ಬಾಲನಾಥೋ ಗುರೂತ್ತಮಃ । [।*]ಇಂ-
15 ತನ್ವಯಸಂಕುದ್ಧರಾದ ಮೋ[ಗೂ]ರ ಬಾಲೊಡಿಯರ ತನೂಭವ ಸೋಮಯ್ಯದೇವವೊ-
16 ಡಿಯರಿಗೆ ದಾನಾರ್ಥವಾಗಿ ಶಿಲಾಸ್ಥಾಪನವ ಮಾಡಿ ಕೊಟ್ಟ ತಗವೂರ ಗ್ರಾಮದ ಚತುಸ್ಸೀ-
17 ಮೆಯ ವಿವರ ಮೂಡಲು ಕುಂತೂರ ಚಿಲಕವಾಡಿಯ ತಗವೂರ ತ್ರಿಸಂಧಿಕಲು ೧ ಪ್ರರದ
18 ಚಿಲಕವಾಡಿಯ ತಗವೂರ ತ್ರಿಸಂಧಿಕಲು ೧ ವೊಳಗೆಜೆಯ ಕೇತದೇವರ ಕಲು ೧ ಬಾಳಿಹ-
19 ಳ್ಳಿಯ ಹೂವಿನಕಟ್ಟೆಯ ಕಲ್ಲು ೧ ಕೆಂಗಡೂರ ಕೊ(ಂ)ಮ್ಮಗೆಜೆಯ ತೋಕಾಳಿಯ ಹಳ್ಳದ ಕಲ್ಲು
20 ೧ ಬೋಗೆಕೆಪೆಯ ಮೂಡಣ ಕೋಡಿಯ ಕಲ್ಲು ೧ ಕೆಂಗಡೂರ ಮಾಲಂಗ್ಗಿಯ ತಗವೂರ ತ್ರಿಸಂ-
21 ಧಿಕಲ್ಲು ೧ ಕುಂತೂರ ಗುಡ್ಡದ ಹುಟ್ಟುಕಲ್ಲು ೧ ಇಂತೀ ಅಷ್ಟದಿಕ್ಕಿನೊಳಗಣ ಮೂವತ್ತ-
22 ಯ್ದು ಲಿಂಗಮುದ್ರೆಯ ಕಲ್ಲೊಳಗಾದ ತಗವೂರ ಗ್ರಾಮದ ಸುಂಕ ಸುವರ್ಣ್ನಾದಾಯ ಗದ್ದೆ
23 ತೋಟ ವಿಶೇಷ ಚರಾದಾ[ಯ*] ಮೊದಲಾಗಿ ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷೀಣ ಆಗಾಮಿ ಸಿದ್ಧಿ
ಸಾಧ್ಯ-
24 ವೆಂಬಷ್ಟಭೋಗ ತೇಜಸ್ವಾಮ್ಯವನು ನಿ(ಂ)ಮ್ಮ ಸ್ತ್ರೀಪುತ್ರಪೌತ್ರಿಸಾವಂತದಾಯಾದಾನುಮ-
25 ತಪುರಸ್ಸರವಾಗಿ ಸಮಸ್ತಬಳಿ ಸಹವಾಗಿ ಆಚಂದ್ರಾರ್ಕ್ಕಸ್ಥಾಯಿಯಾಗಿ ಅನುಭ-
26 ವಿಸಿ ಬಹಿರಿ ಯೆಂದು ಮಾಡಿದ ಧರ್ಮಸಾಧನ ॥ ಸ್ವದತ್ತಂ ದ್ವಿಗುಣಂ ಪುಣ್ಯಂ ಪೊ-
27 ರ್ವ್ವದತ್ತಾನುಪಾಲನಾತ್ । ಪೂರ್ವದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇ-
28 ತ್ ॥ ವನೇ ವನಗತೋ ವೃ[ಕ್ಷ*]ಸ್ವಯಂ ದಹತಿ . . . . . ತ್ರಿಕುಲಂ ಮೂಲಾನಿ ದಹ-
29 ತಿ ಧರ್ಮಸ್ಯಾಗತಪಾರಗಾತ್ । ಸ್ವದತ್ತಾ . . . . . . . ವಾ ಯೋ ಹರೇತಿ ವಸುಂಧ-
30 ರಾ[ಂ*] । ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ [॥*]
31 ಯೀ ದಾನವನು ಅಳಿಹಿದವರು ವಾರಣಾಸಿಯಲಿ ತಂಮ ಗುರು ತಂದೆ ತಾಯ
32 ಕಪಿಲೆಯನು ವಧಿಸಿದ ಪಾಪಕ್ಕೆ ಹೋಹರು ॥

**No. 498.**

(*A.R. No.* 558 *of* 1915.)

ON A PILLAR IN THE KESAVASVAMI TEMPLE AT CHERUVU-BELAGALLU, KURNOOL TALUK, KURNOOL DISTRICT.

This is damaged and dated **Śaka [143]6, Bhāva, Vaiśākha, śu. 15,** corresponding to **A.D. 1514 May 8 Monday** (not verifiable), in the reign of the Vijayanagara king

**Kṛishṇarāya-Mahārāya.** It records that *Karaṇam* **Basavarasa,** son of **Sōmarasa** of **Tirapatūr** who belonged to the Gautama-*gōtra* and Āśvalāyana-*sūtra,* made a gift of a plot of land in **Keriya-Beḷugallu** in the division of **Ādavāni-durga,** to the actor **Nāgayya,** whose father Chāgaya had become famous in the drama called *Tāyikuṇḍa-nāṭaka* and to the actress **Pātri,** daughter of the *Naṭṭuva* **Timmayya** of Pōtavara. The gift was made in the presence of the god **Jalasiṅgadēva** for the merit of the king.

1 ಸ್ವಸ್ತಿ [।।*] ಶ್ರೀಜಯಾಭ್ಯುದಯಶಕ ವರುಷ-
ವಾಹನಶಕವರು .
2 [೧೪೩]೬ ನೆಯ ಭಾವಸಂವತ್ಸರದ ವಯಿ-
ಶಾಖ . . .
3 . . . ಶ್ರೀಮಹಾರಾಜಾಧಿರಾಜ ರಾ-
ಜಪರ-
4 [ಮೇಶ್ವರ] ಶ್ರೀವೀರಪ್ರತಾಪ ಶ್ರೀವೀರಕೃ-
ಷ್ಣರಾಯ-
5 ಮಹಾರಾಯರು ಪ್ರಿಥಿವೀರಾಜ್ಯ ಆಳುತ್ತಿ-
6 ರಲು ಶ್ರೀಮತು [ತಿರಪತೂರ] ಸೋಮರ-
ಸುಗಳ
7 ಮಕ್ಕಳು ಕರಣಂ ಬಾಸವರಸರು [ಕೆರಿ-
8 ಯ]ಬೆಳುಗಲ್ಲ ಜಲಸಿಂಗದೇವರ
9 . . ಪಾತ್ರಿ ಸಹಯ ನಟ್ಟುವ ನಾಗ್ಯೆ-
ಯ್ಯ-
10 ನವರಿಗೆ ಕೊಟ್ಟ [ಬು]ದಾನ ಧರ್ಮಶಾ-
ಸನ
11 . . . ದ ಕ್ರಮವೆಂತೆಂದರೆ ಶ್ರೀವೀರ-
ಕೃಷ್ಣರಾ-
12 ಯರು ನಮಗೆ ಮಾಗಣೆ ಆಗಿ ಕೊಟ್ಟ ಆ-
ದವಾ-
13 ನಿಯದುರ್ಗಕೆ ಸಲುವ ಕೆರಿಯಬೆಳುಗಲ್ಲ
14 ಗ್ರಾಮದಲ್ಲು ಕೃಷ್ಣಭೂಮಿ ಖಂ ೧೦ ಅ
15 ಕೃಷ್ಣಭೂಮಿ ಬೀಜವರಿ ಯೋಳು ಕೊಳ-
16 ಗ ನೆಲ ಆಯಿಗಳ ಅಕ್ಷರದಲು
17 ಆಯಿಗಳ ಭೂಮಿ . . . ಖಂ ೧೦
ನೆಲ ಗದ್ದೆ
18 . ೩ ಅಕ್ಷರದಲು ಮೂಗಳ ಬೀಜವರಿ
[ಯಿಂ]-
19 ತು ಹದಿನಯಿದು ಕೊಳಗ ಬುಮಿ . .
20 ವೈಸಕ ಶು ೧೫ ಪು(ಂ)ಣ್ಯಕಾಲದಲ್ಲು ಜಲ-
21 ಸಿಂಗದೇವರ ಸನಿಧಿಯಲ್ಲು ಸಹಿರಣ್ಯ-
22 ವುದಕದಾನಧಾರಾಪೂರ್ವಕವಾಗಿ [ಅ]-
23 [ಶ್ವ]ಲಾಯನಸೂತ್ರ ಗವುತಮಗೋತ್ರ ತಿ-
ರುಪತುರ
24 ಸೋಮರಸ್ಯಯನವರ ಮಕಳು ಕರಣಿಕ
ಬಸವಯ [ಪೋ]-
25 ತವರದ ನಟ್ಟುವ ತಿಂಮನ ಮಗಳು . .
ಪಾತ್ರಿಗೂ
26 ತಾಯಿಕುಂಡನಾಟಕದ ಚಾಗಯನ ಮಗ
ನಟ್ಟುವ
27 ನಾಗಯನವರಿಗೆ ವಯಿ[ಶಾಖ] ಶು ೧೫
[ಪುಣ್ಯಕಾ]-
28 ಲದಲು ಜಲಸಿಂಗದೇವರ ಸನ್ನಿಧಿಯಲು ಶ್ರೀ-
29 ವೀರಕೃಷ್ಣರಾಯರಿಗೆ ಪುಣ್ಯವಾಗಬೇಕೆಂ
ಯಿಂ-
30 ದು ಕೃಷ್ಣಭೂಮಿಯನು ಖಂ ೧೦ ಅಕ್ಷರದ-
31 ಲು ಅಯಿದು ಕೊಳಗಂ ನೆಲ ಖಂ ೧೦ [ಅ]-
32 [ಕ್ಷ]ರದಲು ಆಯಿಗಳ ಕೆಂ ನೆಲ . .
. .
33 . . . . . . ಖಂ ೯ ೩
34 . . . ನೆಲ್ಲಗದ್ದೆ ಮೂಗಳ ಅಂತು
ಹದಿ-
35 ನಾರುಕೊಳಗ ಭೂಮಿಯನು ಪೋತವರ-
36 ದ ನಟುವ ತಿಂಮಯನ ಮಗಳು ಪಾತ್ರಿ-
ಗೂ-
37 ನು ತಾಯಿಕುಂಡನಾಟಗದ ಚಾಗಯ್ಯನ
38 ಮಗ ನಟುವ ನಾಗಯ್ಯಗೆ ಶ್ರೀರುಕುಶಾ-
39 ಖಯ ಆಶ್ವಲಾಯನಸೂತ್ರದ ಗಉತ-
40 ಮಗೋತ್ರದ ತಿರುಪತೂರ ಸೋಮರ-
41 ಸರ ಮಕ್ಕಳು ಕರಣಿಕ ಬಸವರಸ-
42 ಯ್ಯ[ಗ*]ಳು ವಯಿಸಖ ಶು ೧೫ ಪುಣ್ಯ-
ಕಾಲ-
43 ದಲು ಜಲಸಿಂಗದೇವರ ಸಂನಿಧಿಯ-
44 ಲ್ಲು ಶ್ರೀವೀರಕೃಷ್ಣ-
45 ಮಹಾರಾಯರಿ-
46 ಗೆ ಪು(ಂ)ನ್ಯವಾಗಬೇಕು ಯೆಂದು [ಬೆ]-
47 ಳುಗಲ್ಲ ಗ್ರಾಮ ಕೆಹಿ ಬಡಗ . . .
48 ಕೊಮ್ಮಿರೆಡಿಯ ಮಗ ಗೋಳ . .
49 ವೆಕೊಳದ ಕೃಷ್ಣಭೂಮಿಯ ನೆಲ-
50 ನು ತಾಂದ್ರಪಾಟಿ ಕಾಮಿರೆಡಿಯ ಮಗ
51 ತಿಪ್ಪ ಮಾಡುವ ಗದ್ದೆಯನು ಅಂತು ಆ-
52 ದಿನ್ನೈದು ಕೊಳಗ ಭೂಮಿನು ಸ-
53 ಹಿರ(ಂ)ಣ್ಯಉಧುಕದಾನಧಾರಾಪೂ-
54 ರ್ವಕವಾಗಿ ನಿಂಮ ಪುತ್ರ ಪವು-

55 ತ್ರಪಾರಂ-
56 ಪರೆಯಾಗಿ [ಅ]-
57 ನುಭವಿಸೂದು
58 ಎಂದು ಕೊಟ ಧರ್ಮ-
59 ಶಾಸನ ಮಂಗಳ ಮಹಾ-
60 ಶ್ರೀ ಶ್ರೀ ಶ್ರೀ
61 ಯಿದಕೆ ಯಾರು ತ-
62 ಪಿದರೆ ಕೆತ್ತಯ ತು-
63 ಣೆ ತಿಂದವರು
64 ಬ್ರಾಹ್ಮಣನ ವಾ-
65 ರಣಾಸಿಯಲಿ ಕೊಂದ
66 ಪಾಪದಲಿ ಹೋ[ಹರು॥]

## No. 499.

(*A.R. No.* 513 *of* 1919.)

ON THE BASE OF THE EAST, SOUTH AND WEST VERANDAHS ROUND THE 'ROCK', ARULALA-PERUMAL TEMPLE, LITTLE CONJEEVERAM, CONJEEVERAM TALUK, CHINGLEPUT DISTRICT.

This is dated **Śaka 1436, Bhāva, Āshāḍha, śu. 10, Budhavāra Uttarā-nakshatra.** The date is irregular. In Bhāva=Śaka 1436, Āshāḍha śu. 10 was neither a Wednesday nor was the *nakshatra* Uttarā current on that day. The record refers itself to the reign of the Vijayanagara king **Kṛishṇarāya-Mahārāya.** It gives in Sanskrit verse the genealogy of the king and records that for the merit of himself his father, **Narasaṇa-Nāyaka,** and his mother, **Nāgalādēvi-Amma**, the king had the *Puṇyakōṭi-vimāna* of the god Varadarājadēva gilt with pure gold.

1 ಶುಭಮಸ್ತು । ಹರೇರ್ಲ್ಲೀಲಾವರಾಹಸ್ಯ ದಂಷ್ಟ್ರಾದಂಡಸ್ಸ ಪಾತು ವಃ । ಹೇಮಾದ್ರಿಕಲಶಾ ಯತ್ರ
ಧಾತ್ರೀ ಛತ್ರಶ್ರಿಯಂ ದಧೌ । ಕಲ್ಯಾಣಾಯಾಸ್ತು ತದ್ಧಾಮ ಪ್ರತ್ಯೂಹತಿಮಿರಾಪಹಂ । ಯತ್
ಗಜೋಪ್ಯಗಜೋತ್ಭೂತಂ ಹರಿಣಾಪಿ ಚ ಪೂಜ್ಯತೇ[।*]ಅಸ್ತಿ ಕ್ಷೀರಮಯಾದ್ದೇವೈರ್ಮ್ಮಥ್ಯಮಾ-
ನಾನ್ಮಹಾಂಬುಧೇಃ[।] ನವನೀತಮಿವೋತ್ಭೂತಮಪನೀತತಮೋಮಹಃ । ತಸ್ಯಾಸೀತ್ ತನಯಸ್ತ-
ಪೋಭಿರತುಲೈರನ್ವರ್ಥನಾಮಾ ಬುಧಃ ಪು(ಂ)ಣ್ಯೈಸ್ತಸ್ಯ ಪುರೂರವಾ ಭುಜಬಲೈರಾಯು[ರ್ದ್ವಿ]ಷಾ-
ನ್ನಿರ್ಜ್ಜಿತಃ । ತಸ್ಯಾಯುರ್ನ್ನಹುಷೋಸ್ಯ ತಸ್ಯ ಪುರುಷೋ ಯುದ್ಧೇಯಯಾತಿ[ಃ] ಕ್ಷಿತೌ ಖ್ಯಾತ-
ಸ್ತಸ್ಯ ತು ತುರ್ವ್ವಸುರ್ವ್ವಸುನಿಭಃ ಶ್ರೀದೇವಯಾನೀಪತಿಃ । ತದ್ವಂಶೇ ದೇವಕೀಜಾನಿರ್ದ್ದಿಲೀಪೇ
ತಿಮ್ಮಭೂಪತಿಃ । ಯಶಸ್ವೀ ತಳುವೇನ್ದ್ರೇಷು ಯದೋಃ ಕೃಷ್ಣಇವಾನ್ವಯೇ । ತತೋಭೂತ್
ಬುಕ್ಕಮಾಜಾನಿರೀಶ್ವರಃ ಕ್ಷಿತಿಪಾಲಕಃ । ಅತ್ರಾಸಮಗುಣಭ್ರಂಶಂ ಮೌಳಿರತ್ನಂ ಮಹೀ(ಂ)ಭು-
ಜಾಮ್ । ಪದ್ಮಾಕ್ಷೋ ಬಲಿಜಿನ್ನಿಜೈಸ್ತ್ರಿಭುವನಕ್ರಾನ್ತಿಕ್ಷಮೈರ್ವ್ವಿಕ್ರಮೈಶ್ಶಂಖಂ ಚಕ್ರಮಪಿ
ಶ್ರಿಯಂ ನಿಜಕರೇ ಶ್ರೀದೇವಕೀನಂದನಃ । ಭೂತ್ವಾಪ್ಯತ್ಭುತಮೀಶ್ವರೋಯಮಿತಿ ಯೋ ಭೂ-
ಯಸ್ತರಾಂ ಪಪ್ರಥೇ । ಭೂತಿಂ ಚಾಖಿಲಪೂಜ್ಯತಾಮತಿಭೃಶಂ ಭೂಭೃತ್ಸ್ವತಾಮಾಶ್ರಿತಃ । ಭೂವಾ-
ಸ್ಯೈಕವರೋವರೋ ರವಿರಿವ ಪ್ರಾಪ್ತೋದಯೋಹರ್ನ್ನಿಶಂ । ಯೋ ಮಂದೇಹರಿಪೂನಹನ್ ಕಲಿಬುಧೋ-
ಪೇತೋ ನ ಪ್ಯೇತೋ ರಣಾತ್ । ಆಪೂರ್ವಾಪರವಾರಿರಾಶಿನಿತರಾಮಾಸೇತುಹೇಮಾಚಲಂ ವಿಖ್ಯಾತೋ
ವಿಹಸಂಸ್ತ್ಯಯೋ ವಿತರಣೈರ್ವಿದ್ಯೋತತೇ ದ್ಯೋತರೂನ್ । ಸರಸಾದುದಭೂತ್ತಸ್ಮಾನ್ನರಸಾವನಿ
ಪಾಲಕಃ । ದೇವಕೀನಂದನಾ[ತ್ಕಾ]ಮೋ ದೇವಕೀನಂದನಾದಿವ । ಕಾವೇರೀಮಾಶು ಬದ್ಧ್ವಾ ವ
ಬಹಳಜಲರಯಾಂ ತಾಂ ವಿಲಂಘ್ಯೈವ ಶತ್ರುಂ ಜೀವಗ್ರಾಹ[ಂ] ಗೃಹೀತ್ವಾ ಸಮಿತಿ ಭುಜಬಲಾ-
ತ್ತಂ ಚ ರಾಜ್ಯಂ (ಮ)ತದೀಯಂ । ಕೃತ್ವಾ ಶ್ರೀರಂಗಪೂರ್ವ್ವಂ ತದಪಿ ನಿಜವಶೇ ಪಟ್ಟಣಂ ಯೋ ಬ-
ಭಾಸೇ ಕೀರ್ತಿಸ್ತಂಭನ್ನಿಖಾಯ ತ್ರಿಭುವನಭವನಸ್ತೂಯಮಾನಾಪದಾನಃ । ಚೇರಂ ಚೋಳಂ
ಚ ಪಾಂಡ್ಯಂ ತಮಪಿ ಚ ಮಧುರಾವಲ್ಲಭ(ಂ) ಮ್ಮಾನಭೂಷಂ ವೀರ್ಯೋದಗ್ರಂ ತುರುಷ್ಕಂ ಗಜಪತಿ-
ನೃಪತಿಂ ಚಾಪಿ ಜಿತ್ವಾ ತದನ್ಯಾನ್ । ಆಗಂಗಾತೀರಲಂಕಾಪ್ರಥಮಚರಮಭೂಭೃತ್ತದಂತಂ ನಿತಾ-
ನ್ತಂ ಖ್ಯಾತಕ್ಷೋಣೀಪತೀನಾಂ ಸ್ರಜಮಿವ ಶಿರಸಾಂ ಶಾಸನಂ ಯೋ ವ್ಯತಾನೀತ್ । ವಿವಿಧ-
ಸುಕೃತೋದ್ದಾಮೇ ರಾಮೇಶ್ವರಪ್ರಮುಖೇ ಮುಹುರ್ಮ್ಮುದಿತಹೃದಯಸ್ಥಾನೇ ಸ್ಥಾನೇ ವ್ಯಧ-
ತ್ತ ಯಥಾವಿಧಿ । ಬುಧಪರಿವೃತೋ ನಾನಾದಾನಾನಿ ಯೋ ಭುವಿ ಷೋಡಶ ತ್ರಿಭುವನಜನೋ-
ದ್ಗೀತಂ ಸ್ಫೀತಂ ಯಶಃ ಪುನರುಕ್ತಯನ್ । ತಿಪ್ಪಾಜೀನಾಗಲಾದೇವ್ಯೋಃ ಶ್ರೀಕೌಸಲ್ಯಾಸುಮಿ-

ತ್ರಯೋಃ । ದೇವ್ಯೋರಿವ ನೃಸಿಂಹೇಂದ್ರಾತ್ತಸ್ಮಾತ್ಪಂಕ್ತಿರಥಾದಿವ । ವೀರೌ ವಿನಯಿನೌ ರಾಮ-
ಲಕ್ಷ್ಮಣಾವಿವ ನಂದನೌ । ಜಾತೌ ವೀರನೃಸಿಂಹೇನ್ದ್ರ(ಃ)ಕೃಷ್ಣರಾಯಮಹೀಪತೀ । ವೀರಶ್ರೀ-
ನಾರಸಿಂಹಃ ಸ ವಿಜಯನಗರೇ ರತ್ನಸಿಂಹಾಸನಸ್ಥಃ ಕೀರ್ತ್ಯಾ ನೀತ್ಯಾ ನಿರಸ್ಯನ್ ನೃಗನಳನಹು-
ಷಾನಪ್ಯವನ್ಯಾಮಥಾನ್ಯಾನ್ । ಆಸೇತೋರಾಸುಮೇರೋರವನಿಸುರನುತಃ ಸ್ವೈರಮಾಚೋದ-
ಯಾದ್ರೇರಾ ಪಾಶ್ಚಾತ್ತ್ಯಾಚಲಾಂತಾದಖಿಲಹೃದಯಮಾವರ್ಜ್ಯ ರಾಜ್ಯಂ ಶಶಾಸ । ನಾನಾದಾನಾ-
ನ್ಯಕಾರ್ಷೀತ್ ಕನಕಸದಸಿ ಯಃ ಶ್ರೀ ವಿರೂಪಾಕ್ಷದೇವಸ್ಥಾನೇ ಶ್ರೀಕಾಳಹಸ್ತೀಶಿತುರಪಿ ನಗರೇ
ವೇಂಕಟಾದ್ರೌ ಚ ಕಾಂಚ್ಯಾಂ । ಶ್ರೀಶೈಲೇ ಶೋಣಶೈಲೇ ಮಹತಿ ಹರಿಹರೇಹೋಬಲೇ ಸಂಗಮೇ
ಚ ಶ್ರೀರಂಗೇ ಕುಂಭಘೋಣೇ . . . . . . . . . . . . ಯೋ ಹಿರಣ್ಯಾಶ್ವರಥಮಪಿ ತುಲಾ-
ಪೂರುಷಂ ಗೋ ಸಹಸ್ರಂ । ಹೇಮಾಶ್ವಂ ಹೇಮಗರ್ಭಂ ಕನಕಕರಿರಥಂ ಪಂಚಲಾಂಗಲ್ಯತಾನೀತ್ ।
2 ಪ್ರಾಜ್ಯಂ ಪ್ರಶಾಸ್ಯ ನಿರ್ವಿಘ್ನಂ ರಾಜ್ಯಂ ದ್ಯಾಮಿವ ಶಾಸಿತುಂ । ತಸ್ಮಿನ್ ಗುಣೇನ ವಿಖ್ಯಾತೇ ಕ್ಷಿತೇರಿಂದ್ರೇ
ದಿವಂಗತೇ । ತತೋಽಸ್ಯೈವಾರ್ಯ್ಯವೀರ್ಯ್ಯಶ್ರೀಃ ಕೃಷ್ಣರಾಯಮಹೀಪತಿಃ । ವಿಭರ್ತ್ತಿ ಮಣಿಕೇ-
ಯೂರನಿರ್ವಿಶೇಷಂ ಮಹೀಂ ಭುಜೇ । ಕೀರ್ತ್ಯಾ ಯಸ್ಯ ಸಮಂತತಃ ಪ್ರಸೃತಯಾ ವಿಶ್ವಂ ರುಚೈ-
ಕ್ಯಂ ವ್ರಜೇದಿತ್ಯಾಶಂಕ್ಯ ಪುರಾರಿರಭವತ್ ಫಾಲೇಕ್ಷಣಃ ಪ್ರಾಯಶಃ । ಪದ್ಮಾಕ್ಷೋಽಪಿ ಚತುರ್ಭುಜ-
ಜೋಽಜನಿ ಚತುರ್ವಕ್ತ್ರೋಽಭವತ್ ಪದ್ಮಭೂ[ಃ] ಕಾಳೀ ಖಡ್ಗಮಧಾದ್ರಮಾ ಚ ಕಮಲಂ ವೀಣಾಂ
ಚ ವಾಣೀ ಕರೇ । ಶತ್ರೂಣಾಂ ವಾಸಮೇತೇ ದಧತ ಯಿತಿ ರುಷಾ ಕಿನ್ನು ಸಪ್ತಾಂಬುರಾಶೀನ್ ನಾನಾ-
ಸೇನಾತುರಂಗತ್ರುಟಿತವಸುಮತೀ ಧೂಳಿಕಾಪಾಳಿಕಾಭಿಃ । ಸಂಶೋಷ್ಯ ಸ್ವೈರಮೇತತ್ ಪ್ರತಿನಿಧಿ-
ಜಲಧಿಶ್ರೇಣಿಕಾ[ಂ] ಯೋ ವಿಧತ್ತೇ ಬ್ರ(ಂ)ಹ್ಮಾಂಡಸ್ವರ್ಣಮೇರುಪ್ರಮುಖನಿಜಮಹಾದಾನತೋ-
ಯೈರಮೇಯೈಃ । ಮದ್ದತ್ತಾನರ್ಥಿಸಾರ್ಥಾಶ್ಶ್ರಿಯಮಿಹ ಸುಚಿರಂ ಭುಂಜತಾಮಿತ್ಯವೇತ್ಯ
ಪ್ರಾಯಃ ಪ್ರತ್ಯಾಹರೇತೋ[ಃ*] ತಪನರಥಗತೇರಾಲಯಾನ್ ದೇವತಾನಾಂ । ದತ್ತದಿಗ್ಸ್ವೈತ್ರ-
ವಿತ್ಯಾಪಿ ಚ ಬಿರುದಪದ್ಯೈರಂಕಿತಾಂಸ್ತತ್ರ ತತ್ರ ಸ್ತಂಭಾನ್ ಜಾತಪ್ರತಿಷ್ಠಾನ್ವ್ಯತನುತ ಭುವಿ ಯೋ
ಭೂಭೃದಭ್ರಂಕಷಾಗ್ರಾನ್ । ಕಾಂಚೀಶ್ರೀಶೈಲಶೋಣಾಚಲಕನಕಸಭಾವೇಂಕಟಾದ್ರಿಪ್ರಮುಖ್ಯೇ-
ಷ್ವಾವರ್ತ್ತ್ಯಾವರ್ತ್ತ್ಯ ಸರ್ವೇಷ್ವತನುತ ವಿಧಿವತ್ ಭೂಯಸೇ ಶ್ರೇಯಸೇ ಯಃ । ದೇವಸ್ಥಾನೇಷು
ತೀರ್ಥೇಷ್ವಪಿ ಕನಕತುಲಾಪೂರುಷಾದೀನಿ ನಾನಾದಾನಾನ್ಯನ್ಯೋನ್ಯವದಾನ್ಯೈರಪಿ ಸಮಮಖಿಲೈರಾಗ-
ಮೋಕ್ತಾನಿ ತಾನಿ । ರೋಷಕೃತಪ್ರತಿಪಾರ್ಥಿವದಂಡ[ಃ*] ಶೇಷಭುಜಕ್ಷಿತಿರಕ್ಷಣಶೌಂಡಃ । ಭಾಷೆಗೆ-
ತಪ್ಪುವರಾಯರಗಂಡಸ್ತೋಷಕೃದರ್ಥಿಷು ಯೋ ರಣಚಂಡಃ । ರಾಜಾಧಿರಾಜಇತ್ಯುಕ್ತೋ ಯೋ
ರಾಜಪರಮೇಶ್ವರಃ । ಮೂವರಾಯರಗಂಡಶ್ಚ ಪರರಾಯಭಯಂಕರಃ । ಯಿಂದುರಾಯಸುರತ್ರಾ-
ಣೋ ದುಷ್ಟಶಾರ್ದೂಲಮರ್ದನಃ । ಗಜೌಘಗಂಡಭೇರುಂಡ ಯಿತ್ಯಾದಿಬಿರುದಾನ್ವಿತಃ । ಆಲೋ-
ಕಯ ಮಹಾರಾಜ ಜಯ ಜೀವೇತಿ ವಾದಿಭಿಃ । ಅಂಗವಂಗಕಳಿಂಗಾದ್ಯೈಃ ರಾಜಭಿಸ್ಸೇವ್ಯತೇ
ಚ ಯಃ । ಸ್ತುತ್ಯೌದಾರ್ಯ್ಯ[ಃ] ಸುಧೀಭಿಸ್ಸ ವಿಜಯನಗರೇ ರತ್ನಸಿಂಹಾಸನಸ್ಥ[ಃ] ಕ್ಷ್ಮಾಪಾ-
ಲಾನ್ ಕೃಷ್ಣರಾಯಕ್ಷಿತಿಪತಿರಧರೀಕೃತ್ಯ ನಿತ್ಯ ನೃಗಾದೀನ್ । ಆಪೂರ್ವಾದ್ರೇರಥಾಸ್ತಕ್ಷಿ-
ತಿಧರಕಟಕಾದಾ ಚ ಹೇಮಾಚಲಾಂತಾದಾಸೇತೋರರ್ಥಿಸಾರ್ಥಶ್ರಿಯಮಿಹ ಬಹುಳೀಕೃತ್ಯ
ಕೀರ್ತ್ಯಾ ಸಮಿಂಧೇ । ಉದಯಾದ್ರಿಮುಪಾರೂಢೇ ಕೃಷ್ಣರಾಯದಿವಾಕರೇ ತಮೋಭೂತೋ ಗಜ-
ಪತಿಸ್ಸಂತಸ್ಸಂಜೀವಿತಾ ಭೃಶಂ । ಇಹ ಕಿಲ ಜಗತಿ ನಿಖಿಲಕವಿಕುಲಾಭಿನಂದ್ಯಮಾನೌದಾರ್ಯ್ಯಧೈ-
ರ್ಯ್ಯಶೌರ್ಯ್ಯಾದಿಜನಿತಯಶಃಪೂರಕರ್ಪೂರಪೂರಿತಬ್ರ(ಂ)ಹ್ಮಾಂಡಕರಂಡೇನ ಸಮರಚಂಡೇನ
ವಿಹಸಿತನಳನಹುಷನಾಭಾಗದುಂಧುಮಾರಮಾಂಧಾತೃಭರತಭಗೀರಥದಶರಥರಾಮಾದಿಚರಿತೇನ ಮ-
ಹೀಸುಚರಿತೇನ ಕೃತಭೂಸುರತ್ರಾಣೇನ ಪರಿಭೂತಸುರತ್ರಾಣೇನ ಗಜಪತಿಗಜ . . . .
. . . . . . : ತಸಾಂಪರಾಯೇಣ ಕೃಷ್ಣದೇವಮಹಾರಾಯೇಣ ಕನಕಮಯಮಕಾರಿ
ನಿಖಿಲಮಂಡಲಗಂಡ ತೊಂಡೀರಮಂಡಲಮಂಡನಾಯಮಾನ-
3 ಕಾಂಚೀಪುರೀಕಮಲಿನೀಮಧ್ಯೇ ವಿಹರನ್ ಮದಗಜಾಯಮಾನ ಮತಂಗಜಗಿರಿಶಿರೋಮಕು-
ಟಾಯಮಾನಮಖಿಲಜನಾಭಿವಂದ್ಯಮಾನಂ ಅತಿಸುರಾಚಲಭಾಸಮಾನಂ ಅಸಮಾನಂ ಪುಣ್ಯ-
ಕೋಟಿವಿಮಾನಂ । ತುಂಗಸ್ವಾಯಶಕಾಬ್ದ ಭಾಸುರಗತೌ ಭಾವೇ ಶುಭೇ ವತ್ಸರೇ ಜ್ಯೈಷ್ಠೇ
ಮಾಸಿ ಬುಧೋತ್ತರಾಮಲದಶಮ್ಯಾಪುಷ್ಟೇ ದಿನೇ ವೃಶ್ಚಿಕೇ । ಸೌವರ್ಣಂ ಕರಿಶೈಲಭರ್ತುರ-
ಕರೋತ್ ಶ್ರೀಪುಣ್ಯಕೋಟಿಮ್ಮದ ಸರ್ವೇಷಾನ್ನರಸಾವನೀಂದ್ರತನಯಃ ಶ್ರೀಕೃಷ್ಣರಾಯೋ
ಮಹಾನ್ । ಭೃತ್ಯೇಷು ಪ್ರಥಿತೇಷು ಸತ್ಸ್ವಪಿ ತದಾಗ್ನಾತಃ ಸ್ವಯಂ ಸಹ್ಯಜಾಗಾಧಾಂ-
ಭೋನಿಧಿಪಾವನಿರ್ಯ್ಯದಿ ಸಹ ಪಾಣ್ಯೈರ್ಗೃಹೀತ್ವಾ ದ್ವಿಷಂ ಸಂಗೃಹ್ಯೋದ್ಧಾ ಮಹೀಭೃದಾ-

